ಪ್ರಥಮ ಮುದ್ರಣ: ಮೇ, ೧೯೫೪

ಸಾಧನಾ ಪ್ರಕಾಶನದವರಿಂದ
ದ್ವಿತೀಯ ಮುದ್ರಣ: ಆಗಸ್ಟ್, ೧೯೫೬



ಮುಖಚಿತ್ರ:
**ಎಸ್. ಎನ್. ಅಳಂದಕರ್**

ಬೆಲೆ:
ಸಾದಾಪ್ರತಿ: **ಒಂದು ರೂಪಾಯಿ**
ಗ್ಲೆಜ್‌ಪ್ರತಿ: **ಎರಡು ರೂಪಾಯಿ**

ಮುದ್ರಕರು :
**ಸಾಧನಾ ಪ್ರಿಂಟರಿ,** ಹೈದರಾಬಾದು

# ನಿರಂಜನರ ಕೃತಿಗಳು

**ಕಾದಂಬರಿ**

ವಿಮೋಚನೆ

ಬನಶಂಕರಿ

ಅಭಯ

ದೂರದ ನಕ್ಷತ್ರ

ರಂಗಮ್ಮನ ವಠಾರ

ಸೌಭಾಗ್ಯ

ಪಾಲಿಗೆ ಬಂದ ಪಂಚಾಮೃತ

ಸ್ಕಾರ

ಳ

ದೀಕ್ಷೆ

ಕಲ್ಯಾಣ ಸ್ವಾಮಿ

ನವೋದಯ

**ಕಥಾ ಸಂಕಲನ**

ಸಂಧಿಕಾಲ

ರಕ್ತ ಸರೋವರ

ಅನ್ನಪೂರ್ಣಾ

ಕೊನೆಯ ಗಿರಾಕಿ

**ಪತ್ರ ಸಂಕಲನ**

ಸಾಧನಾ

**ಲೇಖನ ಸಂಕಲನ**

ಐದು ನಿಮಿಷ

**ಭಾಷಾಂತರ**

ತಾಯಿ

ಚೀನಾದ ನೀತಿ ಕಥೆಗಳು

ನಾಡಿನ ನವಚೇತನದ ನಿರ್ಮಾತೃಗಳಾದ

**ಬಡ ಶಾಲಾ ಉಪಾಧ್ಯಾಯರಿಗೆ**

# ಮೊದಲ ಮಾತು

'ದೂರದ ನಕ್ಷತ್ರ'ದ ಮೊದಲ ಮುದ್ರಣದ ಮುನ್ನುಡಿಯ ಕೆಲ ಅಂಶಗಳು ಹೀಗಿವೆ:

× × ×

ಉಪಾಧ್ಯಾಯರ [ಶಾಲಾ ಶಿಕ್ಷಕರು, ಅಧ್ಯಾಪಕರು, ಮಾಸ್ತರರು] ಜೀವನವನ್ನು ಚಿತ್ರಿಸುವ ಸಣ್ಣಕತೆ, ಕಾದಂಬರಿ, ಏಕಾಂಕ ನಾಟಕಗಳು ಕನ್ನಡದಲ್ಲಿ ಈಗಾಗಲೇ ಪ್ರಕಟವಾಗಿವೆ....

...ಇಷ್ಟಿದ್ದರೂ ವಿದ್ಯಾಕ್ಷೇತ್ರದಿಂದಲೇ ಈ ಕಾದಂಬರಿಗೆ ವಸ್ತುವನ್ನು ಆಯ್ದುಕೊಂಡಿದ್ದೇನೆ. ಇದಕ್ಕೆ ಕಾರಣ, ಆ ಕ್ಷೇತ್ರದ ವೈಶಾಲ್ಯ. ಈ ಕಾದಂಬರಿಯೊಂದಕ್ಕೇ ಅಲ್ಲ, ಇನ್ನಷ್ಟು ಕೃತಿಗಳಿಗೂ ಆ ಕ್ಷೇತ್ರ ವಸ್ತು ...ಸುವುದರಲ್ಲಿ ಸಂದೇಹವಿಲ್ಲ.

...ತಿ, ಹಲವು ಉಪಾಧ್ಯಾಯರೊಡನೆ ನನ್ನ ಒಡನಾಟದ ಹಾಗೂ ...ನ ಸೂಕ್ಷ್ಮ ನಿರೀಕ್ಷಣೆಯ ಫಲ. ನನ್ನ ಪಾತ್ರಗಳು ಜೀವಂತ ...ಂಗ್ಯ ಚಿತ್ರಗಳಲ್ಲ, ಅಥವಾ ಪ್ರತಿರೂಪಗಳೂ ಅಲ್ಲ. ವಾಸ್ತ...ಟದಿಂದ ಈ ಕಾಲ್ಪನಿಕ ಚಿತ್ರಗಳನ್ನು ಬರೆದಿದ್ದೇನೆ. ವಿದ್ಯಾ...ಮಸ್ಯೆಯ ಹಿನ್ನೆಲೆಯಲ್ಲಿ ಮಾನವೀಯವಾದ ಕಥೆಯನ್ನು ಬರೆಯಲು ಯತ್ನಿಸಿದ್ದೇನೆ.

ಇತ್ತೀಚೆಗೆ, 'ದೂರದ ನಕ್ಷತ್ರ'ವನ್ನು ನಾನು ಬರೆಯುತ್ತಿದ್ದಾಗಲೆ, ಬೆಂಗಳೂರಲ್ಲಿ ಮೈಸೂರು ಸಂಸ್ಥಾನದ ಪ್ರಾಥಮಿಕ, ಮಾಧ್ಯಮಿಕ, ಹೈಸ್ಕೂಲು ಉಪಾಧ್ಯಾಯರೆಲ್ಲರ ಸಮ್ಮೇಳನ ಜರುಗಿತು. ಹಿರಿಯ ವಿದ್ಯಾತಜ್ಞರೊಬ್ಬರ ಆಹ್ವಾನದ ಮೇರೆಗೆ, ಸಂದರ್ಶಕನಾಗಿ ಹೋಗಿ ಉಪಾಧ್ಯಾಯರ ಜತೆಯಲ್ಲಿ ಕುಳಿತು, ವಿಧವಿಧದ ಭಾಷಣಗಳಿಗೆ ನಾನು ಕಿವಿಕೊಟ್ಟೆ.

ಅಲ್ಲಿ, ನನ್ನ ಕಾದಂಬರಿಯ ಪಾತ್ರಗಳ ಸಾಮೂಹಿಕ ಸ್ವರೂಪವನ್ನು ಕಂಡೆ. ಈ ಅನುಭವ, ನನ್ನ ಪಾತ್ರಗಳು ಹೆಚ್ಚು ಸ್ಫುಟಗೊಳ್ಳಲು ಸಹಾಯಕ ವಾಯಿತು...

...ಈ ಕಾದಂಬರಿಯಲ್ಲಿ ಒಂದೆಡೆ ಹೀಗಿದೆ:

'ಜಯದೇವನೋ, ಭ್ರಮೆ ಇಟ್ಟುಕೊಂಡೇ ಬಂದಿದ್ದ; ವಿದ್ಯಾ ಸರಸ್ವತಿಯ ಮಂದಿರಕ್ಕೇ ಬಂದಿದ್ದ, ಅನನ್ಯ ಭಕ್ತಿಯಿಂದ. ಆದರೆ, ಬಾಗಿಲು ಎಂದು ಭಾವಿಸಿ ಒಳನುಗ್ಗಿದಲ್ಲೇ, ಬಂಡೆಕಲ್ಲು ಮೆಲ್ಲನೆ ಮೂಗಿ... ಸೋಂಕಿತ್ತು...'

ಅದು. ಉಚ್ಚ ಆದರ್ಶಗಳನ್ನಿರಿಸಿಕೊಂಡು ಉಪಾಧ್ಯಾಯನಾಗಲು ಹೊರಟ ವಿದ್ಯಾವಂತ ತರುಣನಿಗಾದ ಅನುಭವ.

ಆದರೆ ಆತ ನಿರಾಶಾವಾದಿಯಲ್ಲ. ಒಂದು ವರ್ಷದ ಉಪಾಧ್ಯಾ ಜೀವನದ ಕೊನೆಯಲ್ಲಿ—

'ವಾಸ್ತವತೆ ಅಣಕಿಸಿದ್ದರೂ ಜಯದೇವ ಸೋತಿರಲಿಲ್ಲ. ಜೀವನ ಕಟು ಸತ್ಯಗಳನ್ನು ಕಲಿಸಿಕೊಟ್ಟು ಆತನ ದೃಷ್ಟಿಯನ್ನು ಸ್ವಚ್ಛ ಪಡಿಸಿತ್ತು.

ಹೃದಯದಲ್ಲಿ ಹುಮ್ಮಸಿತ್ತು: ಬಲವಿತ್ತು ಬಾಹುಗಳಲ್ಲಿ.

ತನ್ನ ಜೀವಿತದ ಗುರಿ ದೂರವಿದ್ದಂತೆ—ಬಲು ದೂರವಿದ್ದಂತೆ— ಆತನಿಗೆ ಕಂಡರೂ 'ಹಾದಿಯನ್ನು ನಾನು ಬಲ್ಲೆ, ಗುರಿ ಸೇರಬ...' ಆತ್ಮವಿಶ್ವಾಸದಿಂದ ಒಳದನಿ ಉಸುರುತಿತ್ತು.'

× × ×

ಇಂತಹ ಚಿತ್ರಣವನ್ನು ಓದುಗರ ಮುಂದಿರಿಸಿದಾಗ, ಒಳಗೊಂದು ಅಳುಕು ನನ್ನನ್ನು ಬಾಧಿಸುತ್ತಿತ್ತು. ಆ ಅಳುಕಿಗೆ ಕಾರಣವಿಷ್ಟೆ. ವಿಚಾರದ ಅಂಶವೂ ಕಲೆಯ ಅಂಶವೂ ಸೃಷ್ಟಿ ಸಾಹಿತ್ಯದಲ್ಲಿ ಸರಿಸಮಾನವಾಗಿರಬೇಕೆಂಬ–ಸಮರಸಗೊಂಡಿರಬೇಕೆಂಬ–ಅಭಿಪ್ರಾಯ ಕನ್ನಡದಲ್ಲಿ ತೀರಾ ಇತ್ತೀಚಿನದು. ನಮ್ಮಲ್ಲಿ ವಿಪುಲವಾಗಿ ಸೃಷ್ಟಿಯಾಗುತ್ತಿರುವುದು, ಮನೋರಂಜನೆಯೊಂದೇ ಗುರಿಯಾಗುಳ್ಳ ಸಾಹಿತ್ಯ. ಓದುಗರ ಅಭಿರುಚಿ ಹೆಚ್ಚಾಗಿ ರೂಪುಗೊಂಡಿರುವುದೂ ಆ ದಿಕ್ಕಿನಲ್ಲೇ. ಹೀಗಿರುತ್ತ, ಸಿಹಿ ಎಂದು ನಾಲಗೆ

ಚಪ್ಪರಿಸುವವರಿಗೆ ಶುಂಠಿಸಕ್ಕರೆಯನ್ನು ಕೊಡಲು ಹೊರಡುವುದು ಸುಲಭದ ಕೆಲಸ ಹೇಗಾದೀತು ?

ಆದರೆ ಕನ್ನಡ ಓದುಗರು ಆ ಭಯವನ್ನು ಬಹಳ ಮಟ್ಟಿಗೆ ನಿವಾರಣೆ ಮಾಡಿರುವರೆನ್ನುವುದು ವಿಚಾರಪರರೆಲ್ಲರಿಗೂ ಸಮಾಧಾನದ ವಿಷಯ; ಮನೋರಂಜನೆಯ ಜತೆಗೆ ವಿಚಾರ ಪ್ರಚೋದನೆಯನ್ನೂ ಮಾಡಬಯಸುವ ಬರೆಹಗಾರರೆಲ್ಲರಿಗೂ ಸಂತೋಷದ ವಿಷಯ. 'ದೂರದ ನಕ್ಷತ್ರ'ವನ್ನು ಕುರಿತು 'ಸಪ್ಪೆ' ಎಂದು ಹೇಳಿದವರಿಗಿಂತಲೂ ಒಪ್ಪಿಗೆ ಸೂಚಿಸಿದವರ ಸಂಖ್ಯೆಯೇ ಹೆಚ್ಚಿನದು. ಅದನ್ನು ಓದಿರುವ ಉಪಾಧ್ಯಾಯರು ಯಾರೂ "ಇದು ನಮ್ಮ ಕಥೆಯಲ್ಲ," ಎಂದು ಹೇಳಿಲ್ಲ. "ಬರೆದಿರುವುದೊಂದು, ವಸ್ತುಸ್ಥಿತಿ ಇನ್ನೊಂದು," ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ.

ಓದುಗರು, ಸೃಷ್ಟನೆಯ ಸಾಹಿತ್ಯವನ್ನು ಬದುಕಿನಲ್ಲಿರುವ ಮೂಲದೊಡನೆ ಹೋಲಿಸಿನೋಡುವ ಪ್ರವೃತ್ತಿಯೂ ಹೊಸದು. ಇಂಥವರ ಸಂಖ್ಯೆ ಸಣ್ಣದಾದರೂ ತೃಪ್ತಿಕರವಾದುದು. ಬದುಕಿಗೂ ಸಾಹಿತ್ಯಕ್ಕೂ ನಿಕಟ ಸಂಬಂಧವಿದೆ ಎನ್ನುವ ವಿಚಾರ, ದಿನದಿಂದ ದಿನಕ್ಕೆ ಬಡಕಲಾಗುತ್ತಿಲ್ಲ—ಬೆಳೆಯುತ್ತ ಸಾಗಿದೆ...

'ದೂರದ ನಕ್ಷತ್ರ'ವನ್ನು ನಾನು ಬರೆದು ಮುಗಿಸಿದಾಗ, 'ಇದು ಅಪೂರ್ಣ' ಎನ್ನುವ ಭಾವನೆ ನನ್ನಲ್ಲಿ ಮೂಡಿ ಬಲಗೊಂಡಿತು. ಹಲವಾರು ಓದುಗರೂ ಅದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಲೆಂದು ನಗರಕ್ಕೆ ಹಿಂತಿರುಗಿದ ಜಯದೇವ, ಪುನಃ ಆ ಹಳ್ಳಿಗೆ ಮರಳುವನೆ ? ಅದೇ ವೃತ್ತಿಯನ್ನು ಕೈಗೊಳ್ಳುವನೆ ? ಎಂದು ಅವರು ನನ್ನನ್ನು ಕೇಳಿದರು

ಆ ಪ್ರಶ್ನೆಗಳಿಗೆ ಉತ್ತರ, ನನ್ನ ಇತ್ತೀಚಿನ ಕಾದಂಬರಿಯಾದ 'ನವೋದಯ'. ಜಯದೇವನ ವೈಯಕ್ತಿಕ ಜೀವನ, ನಾಡಿನ ಬದುಕಿನೊಡನೆ ಹಾಸುಹೊಕ್ಕಾಗಿ ಬೆರೆತು ಮುಂದುವರಿಯುವ ಚಿತ್ರ ಅದರಲ್ಲಿದೆ. 'ದೂರದ ನಕ್ಷತ್ರ'ದ ಮುಂದಿನ ಭಾಗವೆಂದು, ವಾಸ್ತವತೆಯ ಮೂಸೆಯಲ್ಲಿ ಆದರ್ಶವನ್ನು ಪುಟಕ್ಕಿಡುವ ಜಯದೇವನ ಕಥೆಯೆಂದು, ಓದುಗರು 'ನವೋದಯ'ವನ್ನು ಬರಮಾಡಿಕೊಳ್ಳುವರೆಂಬ ನಂಬಿಕೆ ನನಗಿದೆ.

ಕವಿಕಾವ್ಯ ಪಕ್ಷಪಾತಿಯಾದ ಸನ್ಮಿತ್ರ ಜೆ. ಕೆ. ಪ್ರಾಣೇಶಾಚಾರ್ಯರ ನೂತನ ಉದ್ಯಮವಾದ ಸಾಧನಾ ಪ್ರಕಾಶನದ ಮೂಲಕ 'ನವೋದಯ' ಬೆಳಕು ಕಂಡಿದೆ. ಅದರ ಜೊತೆಯಲ್ಲೇ, ಮೊದಲ ಆವೃತ್ತಿ ಎಂದೋ ಮುಗಿದಿದ್ದ 'ದೂರದ ನಕ್ಷತ್ರ'ವನ್ನೂ ಓದುಗರ ಅನುಕೂಲಕ್ಕೆಂದು ಅವರು ಪುನಃ ಪ್ರಕಟಿಸುತ್ತಿದ್ದಾರೆ. ಹೀಗೆ, ಈ ಎರಡು ಕೃತಿಗಳೂ ಜತೆಯಲ್ಲೇ ಓದುಗರ ಕೈಸೇರುವಂತಾಗಿವೆ. ನನ್ನ ಬರವಣಿಗೆಯ ವಿಷಯದಲ್ಲಿ ಆಸಕ್ತಿ ವ್ಯಕ್ತಪಡಿಸಿರುವ ಜೆ. ಕೆ. ಪ್ರಾಣೇಶಾಚಾರ್ಯರಿಗೆ ಈ ಸಂದರ್ಭದಲ್ಲಿ ಕೃತಜ್ಞತೆ ಸಲ್ಲಿಸಬೇಕಾದುದು ನನ್ನ ಕರ್ತವ್ಯ.

**ನಿರಂಜನ**

**ಸೆಪ್ಟೆಂಬರ್ ೧೯೫೬**
**ಗೋಕುಲ ವಿಸ್ತರಣ**
**ವಾಣಿವಿಲಾಸ ಮೊಹಲ್ಲಾ**
**ಮೈಸೂರು**

# ೧

ಜಯದೇವ, ಜಮಖಾನದೊಳಗೆ ಸುತ್ತಿದ್ದ ಪುಟ್ಟ ಹಾಸಿಗೆಯನ್ನು ಒಂದು ಕೈಯಲ್ಲೂ ಪುಸ್ತಕಗಳು ತುಂಬಿದ್ದ ಚೀಲವನ್ನು ಇನ್ನೊಂದು ಕೈಯಲ್ಲೂ ಹಿಡಿದುಕೊಂಡು, ರೈಲುನಿಲ್ದಾಣದಿಂದ ಹೊರಬಂದ. ಆಗಿನ್ನೂ ಬೆಳಗ್ಗೆ ಏಳು ಘಂಟೆ. ಮುಖಕ್ಕೆ ಒಂದಿಷ್ಟು ನೀರು ಹನಿಸಿ, ಗುಟುಕು ಕಾಫಿ ಕುಡಿದು, ಮುಂದಿನ ಪ್ರಯಾಣ ಬೆಳೆಸಬೇಕೆಂಬುದು ಆತನ ಅಪೇಕ್ಷೆ ಯಾಗಿತ್ತು.

ಆದರೆ ಸ್ವಲ್ಪ ದೂರದಲ್ಲೆ ನಿಂತಿದ್ದ ಬಸ್ಸು, ಅದರತ್ತ ಓಡುತಿದ್ದ ಜನರು, ತನ್ನ ಮುಂದಿನ ಪ್ರಯಾಣದ ಹೊರತಾಗಿ ಬೇರೇನನ್ನು ಯೋಚಿಸು ವುದಕ್ಕೂ ಜಯದೇವನಿಗೆ ಅವಕಾಶಕೊಡಲಿಲ್ಲ. ಎಲ್ಲರಂತೆ ಆತನೂ ಬಸ್ಸಿನತ್ತ ಓಡಿದ. ಟಿಕೆಟು ಪಡೆದುಕೊಳ್ಳಲು ಯಾವ ವ್ಯವಸ್ಥೆಯೂ ಇದ್ದಂತೆ ತೋರಲಿಲ್ಲ ಆ ಖಾಸಗಿ ಬಸ್ಸಿನಲ್ಲಿ. ಮೊದಲು ಸ್ಥಾನದ ಆಕ್ರಮಣ. ಆ ಬಳಿಕ ಟಿಕೆಟಿನ ಮಾತು. ಪುಟ್ಟ ಪುಟ್ಟ ಬಾಗಿಲುಗಳ ಮೂಲಕ ಒಳಹೊಗಲು ಸ್ಪರ್ಧೆಯೇ ನಡೆದಿತ್ತು. ಗದ್ದಲ ಕಡಮೆಯಾಗ ಲೆಂದು ದೂರ ನಿಂತರೆ ಸೀಟು ಸಿಗದೇ ಹೋಗಬಹುದು. 'ಬಲವಿದ್ದರೇ ಬದುಕು'–ಇದೊಂದೇ ಅಲ್ಲಿದ್ದ ತತ್ವ. ಬೇರೆ ಉಪಾಯವಿಲ್ಲದೆ, ಬಸ್ಸನ್ನು ಮುತ್ತಿದ ಯೋಧರಲ್ಲಿ ಜಯದೇವನೂ ಒಬ್ಬನಾದ. ಹೃಷ್ಟಪುಷ್ಟನಾದ ಇಪ್ಪತ್ತೆರಡರ ನವಯುವಕ ಜಯದೇವ ಬಸ್ಸನ್ನೇರುವುದರಲ್ಲಿ ಯಶಸ್ವಿ ಯಾಗದಿರಲಿಲ್ಲ.

ಮೂರನೆಯ ಸಾಲಿನ ಮೂಲೆಯಲ್ಲಿ ಬಾಗಿಲ ಬಳಿಯಲ್ಲೆ ಕುಳಿತು, ಸೀಟಿನ ಕೆಳಗೆ ಹಾಸಿಗೆ ಕೈಚೀಲಗಳನ್ನು ತಳ್ಳಿ, ಕ್ರಾಪಿನಮೇಲೆ ಕೈಯೋಡಿಸಿ ಸಮಾಧಾನದ ನಿಟ್ಟುಸಿರು ಬಿಟ್ಟಾಗ, ಒಮ್ಮೆಲೆ ಜಯದೇವನಿಗೆ ಕೆಡುಕೆ ನಿಸಿತು. ತನಗಿಂತ ಕಡಮೆ ಶಕ್ತಿಯುವರನ್ನೋ ಕೈಲಾಗದವರನ್ನೋ ಬದಿಗೆ ತಳ್ಳಿ ಆತ ಒಳಗೆ ಬಂದಿದ್ದನಲ್ಲವೆ? ತಾನು ಹಾಗೆಮಾಡಿದ್ದು ಸರಿ ಎಂದು ಸಮರ್ಥಿಸುವುದು ಸಾಧ್ಯವಿತ್ತೆ? ಸದ್ವರ್ತನೆ ಶಿಷ್ಟಾಚಾರಗಳ ಸಂಪತ್ತು ತನ್ನಲ್ಲಿದೆಯೆಂದು ತಾನು ಭಾವಿಸಿದ್ದು ಸುಳ್ಳಾಯಿತಲ್ಲವೆ?

ಈ ಪ್ರಯಾಣದಲ್ಲಿ ಹೀಗಾದುದು ಇದು ಎರಡನೆಯ ಸಲ. ಹಿಂದಿನ ರಾತ್ರಿ ಬೆಂಗಳೂರಿನ ರೈಲುನಿಲ್ದಾಣದಲ್ಲೂ ಅಂಥದೇ ಅನುಭವವಾಗಿತ್ತು. ಬೀಳ್ಕೊಡಲೆಂದು ಬಂದಿದ್ದ ವೇಣುಗೋಪಾಲನೂ ಜಯದೇವನೂ ಪ್ಲಾಟ್ ಫಾರಂ ಸೇರಿದಾಗ, ಹೊರಡುವ ಗಾಡಿಯಿನ್ನೂ ಬಂದು ನಿಂತಿರಲಿಲ್ಲ.

ಆಗ ವೇಣುಗೋಪಾಲ ಹೇಳಿದ್ದ :

"ಒಂದು ಮಾಡೋಣ ಜಯಣ್ಣ. ಗಾಡಿ ಬರುತ್ಲೆ ನಾನು ಬೇಗ್ನೆ ಹತ್ಕೊಂಡ್ಬಿಟ್ಟು ಮೇಲ್ಗಡೆ ಜಾಗ ಹಿಡೀತೀನಿ. ನೀನು ಮಲಕೊಂಡ್ಬಿಡು!"

ಇತರರು ಕುಳಿತೋ ನಿಂತೋ ಪ್ರಯಾಣ ಮಾಡುವಾಗ ತಾನು ಮಲಗಿರುವ ಸನ್ನಿವೇಶ......

"ರೈಲುಗಾಡೀಲಿ ನಂಗೆ ನಿದ್ದೆ ಬರೋಲ್ಲ ವೇಣು."

"ಸಾಕು, ಗೊತ್ತು. ಯಾಕೆ ನಿದ್ದೆ ಬರೊಲ್ವೊ ನೋಡ್ತೀನಿ... ನೋಡಪ್ಪ ಜಯಣ್ಣ, ಈ ಸಂಕೋಚ ಎಲ್ಲಾ ಬಿಟ್ಬಿಡು. ಹ್ಯಾಗಾದರೂ ಮಾಡಿ ಜಾಗ ಹಿಡೀತೀನಿ. ಸ್ವಸ್ಥ ಮಲಕೋ. ರಾತ್ರೆಯೆಲ್ಲಾ ಜಾಗರವಿದ್ದು, ಬೆಳಗ್ಗೆ ಬಾಡಿದ ಸೋರೆಕಾಯಿ ಹಾಗೆ ಮುಖ ಮಾಡ್ಕೊಂಡು ಅದೇನು ಹೋಗಿ ನೋಡ್ತೀಯೋ ಅವರ್ನೆಲ್ಲಾ!"

ಜಯದೇವನಿಗೂ ಅದು ಹೌದೆನಿಸಿತು.

ಗಾಡಿ ಬಂದು ಪೂರ್ತಿ ನಿಲ್ಲುವುದಕ್ಕೂ ಇಲ್ಲ. ಅಷ್ಟರಲ್ಲೆ ವೇಣುಗೋಪಾಲ ನೂಕು ನುಗ್ಗಲಿನಲ್ಲಿ ಮುಂದಾಗಿ ಮೂರನೆ ತರಗತಿಯ ಡಬ್ಬಿಯೊಂದನ್ನೇರಿದ. ಹೊರಗಿಂದ ಹಾಸಿಗೆಯ ಸುರುಳಿ-ಚೀಲ ಎತ್ತಿಕೊಂಡು ಗಾಡಿ ನಿಲ್ಲುವವರೆಗೆ ಜಯದೇವನೂ ಓಡಬೇಕಾಯಿತು. ಸದ್ದು ಗದ್ದಲ ಮಾಡುತ್ತ ಕಿಟಕಿಯ ಮೂಲಕ ಜಯದೇವನ ಸಾಮಾನುಗಳನ್ನು ಒಳಕ್ಕೆ ಳೆದುಕೊಂಡು ವೇಣು ಮೇಲಿನ ಹಲಿಗೆಗೆ ಏರಿಸಿದ. ಕೈಕೊಟ್ಟು ಜಯದೇವನನ್ನೂ ಕಿಟಕಿಯ ಮೂಲಕವೆ ಒಳಕ್ಕೆ ಬರಸೆಳೆದುಕೊಂಡು, ಮೇಲಕ್ಕೆ ಕಳುಹಿಕೊಟ್ಟ. ಹಾಸಿಗೆ ತಲೆದಿಂಬಾಯಿತು. ಚೀಲ ಬಲಮಗ್ಗುಲು ಸೇರಿತು. ಜಯದೇವ ಕಾಲುನೀಡಿ ಮಲಗಿಕೊಂಡ.

ಗಾಡಿ ಹೊರಡಲು ಆಗಿನ್ನೂ ಅರ್ಧ ಘಂಟೆಯಿತ್ತು.

"ಕಣ್ಣು ಮುಚ್ಚಿ ನಿದ್ದೆ ಬಂದವರ ಹಾಗೆ ಮಲಕೊ ಜಯಣ್ಣ. ನಾನು

ಇನ್ನು ನಿಂತು ಪ್ರಯೋಜನವೂ ಇಲ್ಲ. ಟಾ ಟಾ ಬೈ ಬ್ಯಾ ಎಲ್ಲಾ ಇಲ್ಲೇ! ಹೊರಡ್ತೀನಿ ಇನ್ನು."

ವೇಣು ವ್ಯವಹಾರಕುಶಲನಾಗಿದ್ದ. ಅವನು ಹೇಳಿದುದು ಸರಿಯಾಗಿತ್ತು.

"ಹೌದು ವೇಣು. ಹೋಗಪ್ಪ ಇನ್ನು."

"ಕಾಗದ ಬರೀತಿಯೇನಯ್ಯ ತಪ್ಪದೆ ?"

"ಆ ಪ್ರಶ್ನೇನ ನಾನೇ ಕೇಳ್ಬೇಕೂಂತಿದ್ನಲ್ಲೋ !"

ವೇಣು ನಕ್ಕು, ಜಯದೇವನ ಭುಜ ಮುಟ್ಟಿ ಮೃದುವಾಗಿ ಅದುಮಿದ. ಅನಂತರ ಮಾತಿಗೆ ಆಸ್ಪದವಿರಲಿಲ್ಲ. ತಲೆಯಾಡಿಸಿ, ಕಿಟಕಿಯ ಮೂಲಕವೆ ಕೆಳಕ್ಕೆ ಧುಮುಕಿ, ವೇಣುಗೋಪಾಲ "ಬರ್ತೀನಿ ಜಯಣ್ಣಾ!" ಎಂದು ಅಲ್ಲಿಂದಲೇ ಅಂದು, ಹೊರಟು ಹೋದ.

ಆದರೆ ಹಾಗೆ ದೊರೆತಿದ್ದ ಜಾಗ, ಮೊದಲ ಜಯ ಮಾತ್ರ. ಜನರು ಒಳನುಗ್ಗಿದಂತೆ ಸಾಮಾನುಗಳು ಹೆಚ್ಚಿದುವು. ಯಾವನೋ ಇನ್ನೊಬ್ಬ ಮಲಗಿದ್ದ ಜಯದೇವನ ಎದುರುಗಡೆ. ಆತನೊಡನೆ ಪ್ರಯಾಣಿಕರು ಜಗಳವನ್ನೇ ಆರಂಭಿಸಿದರು. ಸ್ವಲ್ಪ ಕಾಲು ಮುದುಡಿಸಿಕೊಂಡು ಕೆಲವು ಸಾಮಾನುಗಳಿಗೆ ಜಯದೇವ ಜಾಗ ಮಾಡಿಕೊಟ್ಟ. ತಮಿಳು ನಾಡಿನ ಕೂಲಿಯಾಳುಗಳ, ಅವರ ಹೆಂಗಸರು, ಮುದುಕರು, ಚಿಳ್ಳೆ ಪಿಳ್ಳೆಗಳ— ದೊಡ್ಡದೊಂದು ತಂಡವೇ ಒಳಬಂತು. ಮಾರವಾಡಿಗಳ ದೊಡ್ಡ ದೊಡ್ಡ ಟ್ರಂಕುಗಳು ಎರಡು ಮೂರು ಜಯದೇವನತ್ತ ಸುಳಿದಾಡಿದುವು.

ಯಾರೋ ಕೂಗಾಡಿದರು:

"ಆ ಜಾಗ ಇರೋದು ಮಲಗೋಕಲ್ಲ, ಏಳ್ರಿ !"

ಅವಕಾಶ ದೊರೆತಿದ್ದರೆ ಹಾಗೆ ಹೇಳಿದವರೇ ಆ ಜಾಗದಲ್ಲಿ ಮೊದಲು ಮಲಗುತಿದ್ದರೆಂಬುದು ಜಯದೇವನಿಗೆ ಗೊತ್ತಿರಲಿಲ್ಲವೆ ?... ಅಂತಹ ಮಾತು ಕೇಳಿದಾಗ 'ಹಾಳಾಗಿ ಹೋಗಲಿ, ಇಳಿದು ಬಿಡೋಣ' ಎನ್ನಿಸಿತು ಅವನಿಗೆ. ಆದರೆ, ಹಾಗೆ ಇಳಿದುದು ಮುಂದೆ ತಿಳಿದಾಗ ವೇಣುಗೋಪಾಲ ಮಾಡಬಹುದಾದ ಪರಿಹಾಸ್ಯದ ನೆನಪಾಗಿ, ಜಯದೇವ ಇಳಿಯಲು ಇಷ್ಟಪಡಲಿಲ್ಲ. ನಿದ್ದೆ ಹೋದವನಂತೆ ನಟಿಸುತ್ತ ಆತ ಮಲಗಿದ. ಆಗಾಗ್ಗೆ ಕಳ್ಳ ನೋಟ

ದಿಂದ ನೋಡಿದ ಅವನಿಗೆ, ಇದ್ದ ಜಾಗದ ಮೂರರಷ್ಟು ಜನ ಸೇರಿಕೊಂಡು ಬೇಗೆಯಲ್ಲಿ ನರಳುತಿದ್ದ ದೃಶ್ಯ ಕಾಣುತಿತ್ತು.

ಸ್ವಲ್ಪ ಹೊತ್ತಿನಲ್ಲೆ ಗಾಡಿ ಚಲಿಸಿ ತಣ್ಣನೆ ಗಾಳಿ ಬೀಸಿತು. ಬೇರೆ ಹಾದಿಯಿಲ್ಲದೆ ಒಂದು ರಾತ್ರಿಯನ್ನು ಹಾಗೆಯೇ ಕಳೆಯಲು ಸಿದ್ಧರಾದವರಂತೆ ಜನರು ಸುಮ್ಮನಾದರು.

ಎಲ್ಲ ಮಾನವ ಪ್ರಾಣಿಗಳಂತೆಯೇ ತಾನೂ ಕೂಡಾ ಎಂದು ಭಾವಿಸಿದ್ದ ಜಯದೇವ. ತಾನು ಪರೋಪಕಾರಿಯಾಗಿ ಬಾಳಬೇಕೆಂದು ಆತನ ಬಯಕೆ. ಆದರೆ ಮನಸ್ಸಿನಲ್ಲಿದ್ದುದಕ್ಕೂ ಕೃತಿಯಲ್ಲಿ ನಡೆದುದಕ್ಕೂ ವ್ಯತ್ಯಾಸ ವಿತ್ತಲ್ಲವೆ? ತಾನು ಸ್ವಾರ್ಥಿ ಎಂದು ತೋರಿಸಿಕೊಂಡ ಹಾಗಾಯಿತಲ್ಲವೆ ?

ಮನಸ್ಸು ಕದಡುವುದಕ್ಕೆ ಮುಂಚೆಯೆ ರಾತ್ರಿಯ ತಂಗಾಳಿ ಜಯದೇವನ ನೆರವಿಗೆ ಬಂತು. ಡಬ್ಬಿಯಲ್ಲಿ ನಡೆಯುತಿದ್ದ ಮಾತುಕತೆಗಳೂ ಕ್ರಮೇಣ ಕಡಮೆ-ಬಲು ಕಡಮೆ-ಯಾದುವು. ಗಾಡಿಯ ಚಲನೆಯ ಗುಸು ಗುಸು ಧ್ವನಿಯೇ ಜಯದೇವನ ಪಾಲಿಗೆ ಜೋಗುಳವಾಯಿತು. ಡಬ್ಬಿಯ ಮಾಡದಿಂದ ಬೆಳಕು ಬೀರುತ್ತಿದ್ದ ವಿದ್ಯುದ್ದೀಪವನ್ನೂ ಗಮನಿಸದೆ, ನಿದ್ದೆ ಆತನ ಮೇಲೆ ತನ್ನ ಹೊದಿಕೆಯನ್ನೆಳೆಯಿತು.

.............

ಆದರೆ ಈಗ ಬಸ್ಸಿನಲ್ಲಿ ಕುಳಿತ ಜಯದೇವನಿಗೆ ಅಂತಹ ಅನುಕೂಲತೆ ಗಳಿರಲಿಲ್ಲ. ಆತನಿದ್ದುದು ಎಚ್ಚರಗೊಂಡಿದ್ದ ಜಗತ್ತಿನಲ್ಲಿ. ಇಲ್ಲಿ ನಿದ್ದೆ ಹೋದವರ ಹಾಗೆ ಕಣ್ಣು ಮುಚ್ಚಿಕೊಂಡು ಯಾರಿಂದಲೂ ಏನನ್ನೂ ಆತ ಮರೆಮಾಚುವ ಹಾಗಿರಲಿಲ್ಲ.

ಆ ಕಾರಣದಿಂದಲೆ, ತನ್ನ ಮನಸಿನ ಹೊಯ್ದಾಟ ಕಂಡು ಆತನಿಗೆ ನಗು ಬಂತು.

ಬಸ್ಸು ಹೊರಡುವ ಲಕ್ಷಣವೇ ಕಾಣಿಸಲಿಲ್ಲ. ಅದರ ಸಾರಥಿಯಾಗಲೀ ಸಹಾಯಕನಾಗಲೀ ಅಲ್ಲಿ ಇರಲಿಲ್ಲ. ಅಂತೂ ಪ್ರಯಾಣಿಕರಿಗೆಲ್ಲ ಕುಳಿತು ಕೊಳ್ಳಲು ಜಾಗ ದೊರೆಯಿತು.

ಕಂಡಕ್ಟರ್ ಟಿಕೆಟು ಕೊಡಲು ಬಂದಾಗ ಜಯದೇವ ಕೇಳಿದ:

"ಬಸ್ಸು ಹೊರಡೋದು ಎಷ್ಟು ಹೊತ್ತಿಗೆ ಇವರೇ?"

"ಇನ್ನೇನು ಟೇಮು ಆಗ್ಹೋಯ್ತು ಸಾರ್."

"ಕಾಫಿಗೆ ಪುರಸೊತ್ತು ಇದೆಯೊ?"

"ಓ ! ಅದಕ್ಕೇನಸ್ವಾರ್ ಹೋಗ್ಬನ್ನಿ."

ಒಂದು ರೂಪಾಯಿ ಒಂದಾಣೆ ಕೊಟ್ಟು ಜಯದೇವ ಟಿಕೆಟು ಪಡೆದು ಕೊಂಡ. ಪುಸ್ತಕಗಳ ಚೀಲವನ್ನು ತಾನು ಕುಳಿತಿದ್ದ ಸ್ಥಾನಕ್ಕೇರಿಸಿ, "ಸ್ವಲ್ಪ ನೋಡ್ಕೋತೀರಾ?" ಎಂದು ಪಕ್ಕದವರನ್ನು, 'ದಯವಿಟ್ಟು ನೋಡಿಕೊಳ್ಳಿ' ಎಂಬರ್ಥದಲ್ಲಿ ಕೇಳಿ, ಕೆಳಕ್ಕಿಳಿದ.

ಅಲ್ಲೇ ಇತ್ತು ಉಡುಪಿ ಬ್ರಾಹ್ಮಣರ ಹೋಟೆಲು.

'ಈ ಸಾಹಸಿಗಳಿಲ್ಲದ ಊರೇ ಇಲ್ಲ.'

–ಎಂದುಕೊಂಡು ಜಯದೇವ ಅತ್ತ ಸಾಗಿದ. ಆತ ಕಾಫಿಗೆಂದು ಇಳಿದುದನ್ನು ಕಂಡು ಬೇರೆಯೂ ಕೆಲವರು ಅವನ ಮೇಲ್ಪಂಗ್ತಿಯನ್ನು ಅನುಸರಿಸಿದರು.

'ನಮ್ಮ ಜನರೇ ಹಾಗೆ. ಒಬ್ಬರು ಮುನ್ನುಗ್ಗದೇ ಇದ್ದರೆ ಅವರಿಗೆ ಧೈರ್ಯವೇ ಬರೋದಿಲ್ಲ.'

–ಎಂದು ಜಯದೇವನಿಗೆ ಅನಿಸಿತು.

ಆತ ಅವಸರವಾಗಿ ಮುಖ ತೊಳೆದು, ಎರಡು ಇಡ್ಲಿ ತಿಂದು, ಕಾಫಿ ಕುಡಿದು ದುಡ್ಡು ಕೊಡುತ್ತಿದ್ದಂತೆ, ಹೊಸತಾಗಿ ತೋರಿದ ದಿನಪತ್ರಿಕೆ ಯೊಂದು ಅವನ ಕಣ್ಣಿಗೆ ಬಿತ್ತು.

"ಇವತ್ತಿನ್ದೆ ಪೇಪರು?"

ದುಡ್ಡು ಪಡೆಯುತ್ತಿದ್ದವರು "ಹೌದು" ಎಂದರು, ಜಯದೇವನನ್ನೆ ನೋಡುತ್ತ.

ಮಡಚಿದ್ದ ಪತ್ರಿಕೆಯನ್ನು ಎತ್ತಿ ಬಿಡಿಸಿದ ಜಯದೇವ. ಆದರೆ ಪುಟದ ಅಗಲಕ್ಕೂ ಇದ್ದ ಶಿರೋನಾಮೆ...... ಅದನ್ನು ಈಗಾಗಲೇ ತಾನು ಓದಿದ್ದ ನಲ್ಲವೆ?

"ಇದು ಹಳೇದು."

ಆದರೆ ಹೋಟೆಲಿನವನು ಬುದ್ಧಿವಂತನಾಗಿದ್ದಂತೆ ತೋರಿತು.

"ನೀವು ಬೆಂಗಳೂರಿಂದ ಬಂದಿರಾ?"

"ಹೌದು."

"ಸರಿ ಮತ್ತೆ ! ನೀವು ನಿನ್ನೆ ಅಲ್ಲಿ ಓದಿದ್ದೇ ನಮಗೆ ಇಲ್ಲಿ ಇವತ್ತಿನ್ದು!"

ಜಯದೇವ ನಕ್ಕು, ಪತ್ರಿಕೆಯನ್ನು ಮೇಜಿನ ಮೇಲಿರಿಸಿ, ಹೊರ ಕ್ಕಿಳಿದ. ಒಂದು ಊರಿನಿಂದ ಇನ್ನೊಂದು ಊರಿಗಿರುವ ಕಾಲದ ಅಂತರ. ಬೆಂಗಳೂರಲ್ಲಿ ನಿನ್ನೆ ಸಂಜೆ ಬಿಸಿಬಿಸಿ ಸುದ್ದಿಯಾಗಿದ್ದುದು ಈ ಊರಲ್ಲಿ ಈಗ ಬಿಸಿಬಿಸಿ ಸುದ್ದಿ. ಮುಂದೆ ತಾನು ಹೋಗುವ ಊರಲ್ಲಿ ಅದು ಬಿಸಿ ಸುದ್ದಿ ಯಾಗಲು ಇನ್ನೂ ತಡವಾಗಬಹುದು. ತನ್ನ ಜತೆಯಲ್ಲೇ ಅದೇ ಗಾಡಿ ಯಲ್ಲೇ ಆ ಪತ್ರಿಕೆಯೂ ಪ್ರವಾಸ ಮಾಡಿರಬೇಕು ಹಾಗಾದರೆ. ಈಗ ಈ ಬಸ್ಸಿನಲ್ಲೂ ಜತೆಯಲ್ಲಿರಬಹುದು, ಮುಂದಿನ ಊರುಗಳಿಗೆ ಹೊರಟ ಪತ್ರಿಕೆ. ಕಾಗದ ಪತ್ರಗಳೂ ಅಷ್ಟೇ... ಆ ರೀತಿ ಜಗತ್ತಿನ ವ್ಯವಹಾರಗಳು ಕೆಲವನ್ನು ನಿರೀಕ್ಷಿಸಿ ತಿಳಿದುಕೊಂಡ ಜಯದೇವನಿಗೆ, ಅಲ್ಲಿ ತಾನು ಒಂಟಿ ಎಂಬ ಭಾವನೆ ಹೊರಟು ಹೋಯಿತು.

ಬಸ್ಸು ಪೊಂ ಪೊಂ ಸದ್ದು ಮಾಡಿತೆಂದು ಜಯದೇವ ಲಗುಬಗೆಯಿಂದ ಅದರತ್ತ ಹೋದ. ಆದರೆ ಆ ಕರೆ, ಹೊರಡುವ ಲಕ್ಷಣವೇನೂ ಆಗಿರಲಿಲ್ಲ. ಮತ್ತೆ ಆಸೀನನಾದ ಜಯದೇವ ತನ್ನ ಸುತ್ತುಮುತ್ತಲೂ ದೃಷ್ಟಿಯೋಡಿ ಸಿದ... ಮೊದಲ ಸೀಟನಲ್ಲಿ ಒಬ್ಬ ಯುವಕನೊಡನೆ ಭಾರೀ ಗಾತ್ರದ ಹಿರಿಯ ರೊಬ್ಬರು ಕುಳಿತಿದ್ದರು. ಜರಿಯಂಚಿನ ಪೇಟ, ಉಣ್ಣೆಯ ಕೋಟು...... ಯಾರೋ ಹಳ್ಳಿಗಾಡಿನ ಶ್ರೀಮಂತರಿರಬೇಕು...ಎರಡನೆಯ ಸಾಲು ಹೆಂಗ ಸರದು. ಮೊದಲ ಸೀಟಿನವರ ಕುಟುಂಬವಿರಬಹುದು. ಹಾಗೆಯೇ ಬೇರೆ ಯುವರೂ ಕೂಡಾ. ಎರಡು ಮಕ್ಕಳು ಅಳುತ್ತಿದ್ದುವು. ಹೆಂಗಸರ ಗಿಲಿಗಿಲಿ ಮಾತುಕತೆ ನಡೆದಿತ್ತು. ತಲೆಯಿಂದಿಳಿದು ಸೀಟಿಗೂ ಸೀರೆಯ ಸೆರಗಿಗೂ ನಡುವೆ ಮರೆಯಾಗಿದ್ದ ಅದೊಂದು ಜಡೆ— ಎಷ್ಟು ಮಾಟವಾಗಿತ್ತು! ನೋಡಬೇಕೆನಿಸುತಿತ್ತು ಮತ್ತೆ ಮತ್ತೆ. ಮುಡಿದಿದ್ದ ಸಂಪಗೆ ಹೂಗಳು ಬಾಡಿದ್ದರೂ ಪ್ರತಾಪ ತೋರಿಸುತ್ತಿದ್ದವು. ಆ ಜಡೆಯ ಒಡತಿಯ ಮುಖ ದರ್ಶನವಾದರಾದೀತೆಂದು ತೋರಿತು ಜಯದೇವನಿಗೆ.

ಒಮ್ಮೆ ಹಿಂದಕ್ಕೆ ತಿರುಗಿದಳು ಆ ಯುವತಿ. ಜಯದೇವನಿಗೆ ನಿರಾಶೆಯಾಯಿತು!..

ಅಂತೂ ಬಸ್ಸು ಚಲಿಸಿತು.

ಬಸ್ಸು ಪಶ್ಚಿಮಕ್ಕೆ ಓಡಿದಂತೆ ಸೂರ್ಯ ಪೂರ್ವದಿಂದ ಅದನ್ನು ಬೆನ್ನಟ್ಟಿಕೊಂಡೇ ಬಂದ. ಆದರೆ ನೆಲ ಗಿಡ ಮರ, ಮುಂಗಾರು ಮಳೆಯ

ರುಚಿ ನೋಡಿದ್ದುವು ಆಗಲ. ಸೂರ್ಯನ ಏಕಾಧಿಪತ್ಯವಿದ್ದ ಸುಡುಬೇಸಗೆ ಕಳೆದು ಹೋಗಿತ್ತು. ಆದರೂ ಸೋಲನ್ನೊಪ್ಪಿಕೊಳ್ಳದೆ ಆ ಸೂರ್ಯ ಗಹಗಹಿಸಿ ನಗುತ್ತಿದ್ದ.

ಬಸ್ಸು ಹಾರಿ ಎದ್ದು ಬಿದ್ದು ತನ್ನ ಮೈಯನ್ನೂ ಪ್ರಯಾಣಿಕರ ಮೈಗಳನ್ನೂ ಕುಲುಕುತ್ತಾ ಕೊರಕಲು ಹಾದಿಯಲ್ಲಿ ಓಡುತ್ತಿದ್ದಂತೆ, ಜಯದೇವ ಆಗಾಗ್ಗೆ ಮುಗುಳು ನಕ್ಕ—ಸೂರ್ಯನ ಪರಿವೆ ಇಲ್ಲದೆ. ಹೊರಗಿನ ದೃಷ್ಟಿಯೇನೋ, ಗೋಚರವಾಗಿ ಮರೆಯಾಗುತ್ತಿದ್ದ ಹೊಲ ಗುಡಿಸಲು ಹುಲ್ಲು ಗಾವಲು ಪೊದೆ ಪೊದರು ಮರಗಳನ್ನು ನೋಡುತ್ತಿತ್ತು. ಆದರೆ ಮನಸಿನೊಳಗೆ ನಡೆಯುತಿದ್ದ ನೆನಪಿನ ಆಟವೇ ಬೇರೆ. ಸ್ಮರಣೆಯ ಲೋಕದ ವಿವಿಧ ವ್ಯಕ್ತಿಗಳೊಡನೆ ಓಡಾಡುತ್ತಾ ಸಹಪ್ರಯಾಣಿಕರನ್ನೆಲ್ಲ ಜಯದೇವ ಮರೆತ.

............

ಉದ್ಯೋಗದ ಆಜ್ಞಾಪತ್ರ ಕೈಸೇರಿದಮೇಲೆ ಜಯದೇವ ತನ್ನ ಹುಟ್ಟೂರಿಗೆ ಹೋಗಿದ್ದ-ತನ್ನ ಮನೆಗೆ. ಅದು ಕಾನಕಾನಹಳ್ಳಿಯ ಪ್ರವಾಸ. ಸ್ವಾತಂತ್ರ್ಯ ಬಂದಮೇಲೆ ಆದ ಮಾರ್ಪಾಟುಗಳಲ್ಲಿ ಆತನ ಊರಿನ ಹೆಸರು ಬದಲಾದುದೂ ಒಂದು. ಕನಕಪುರ. ಬಂಗಾರ ಅಲ್ಲಿ ಬೇಕಷ್ಟು ಇದೆಯೋ ಇಲ್ಲವೋ! ದಟ್ಟದರಿದ್ರರಾದ ಲಕ್ಷ್ಮೀನಾರಾಯಣರಿರು ವುದಿಲ್ಲವೆ?—ಹಾಗೆ ಎಂದುಕೊಂಡರಾಯಿತು. ಆದರೂ ಜಯದೇವನಿಗೆ ಕಾನಕಾನಹಳ್ಳಿ ಎಂಬ ಹೆಸರೇ ಇಷ್ಟ.

ಕಾನಕಾನಹಳ್ಳಿ ಸೇರಿದ ಜಯದೇವ ಅಲ್ಲಿ ಒಂದು ದಿನವೂ ಇರಲಿಲ್ಲ. ಅದು ಹೆಸರಿಗೆ ಮಾತ್ರ ಆತನ ಮನೆ. ಆದರೆ ಆತನದಾಗಿ ಅಲ್ಲೇನಿತ್ತು? ಜಯದೇವ ತಬ್ಬಲಿಯಾಗಿ ಬೆಳೆದವನು. ತಂದೆಗೆ ಎರಡನೆಯ ಮದುವೆ ಯಾಯಿತು. ಆ ಮಲತಾಯಿ ಎರಡು ಮೂರು ವರ್ಷ ವಾತ್ಸಲ್ಯಮಯಿ ಯಾಗಿಯೇ ಇದ್ದಳು. ತನ್ನದೇ ಆದ ಮಗು ಬರುವತನಕ...ಅನಂತರ ಒಂದಲ್ಲ ಎರಡು ಮೂರು. ತಂದೆ, ತನ್ನ ಕೆಲಸ ಕಾರ್ಯಗಲ್ಲಷ್ಟೆ ನಿರತ ನಾಗಿದ್ದ ಶಾನುಭೋಗ. ಮಕ್ಕಳ ಲಾಲನೆ ಪಾಲನೆಗಾಗಿ ಹೆಚ್ಚು ಕಾಲ ವ್ಯಯಮಾಡುವುದು ಆತನಿಂದಾಗಲಿಲ್ಲ.

'ಲೋಯರ್ ಸೆಕೆಂಡರಿ' ಪರೀಕ್ಷೆ ಮುಗಿಸಿಕೊಂಡು ಜಯದೇವ ಬೆಂಗಳೂರಿಗೆ ಬಂದು ಬಿಟ್ಟ. ಬಲುದೂರದ ಸಂಬಂಧಿಕರೊಬ್ಬರ ಮನೆಯಲ್ಲಿ ಅಡುಗೆ ಕೆಲಸ ಮಾಡುತ್ತ ಊಟ ಸಂಪಾದಿಸುತ್ತ ಆತ ಓದು ಕಲಿತ. ಹೈಸ್ಕೂಲು ಮುಗಿದ ಮೇಲೆ ಒಂದು ವರ್ಷ ಉಚ್ಚಶಿಕ್ಷಣದ ಆಸೆ ಇಲ್ಲದೆ ಜಯದೇವ ದಿನ ಕಳೆಯಬೇಕಾಯಿತು. ಕೊನೆಗೆ ಒಂದು ವಿದ್ಯಾರ್ಥಿ ವೇತನ ಆತನ ನೆರವಿಗೆ ಬಂತು. ಬಡ ಹಾಸ್ಟಲೊಂದರಲ್ಲಿ ಪುಕ್ಕಟೆಯಾಗಿ ತುತ್ತು ಅನ್ನ ದೊರೆಯಿತು. ಸಣ್ಣ ಹುಡುಗರಿಗೆ ಪಾಠ ಹೇಳಿಕೊಟ್ಟು, ಬಟ್ಟೆ ಬರೆಗಾಗಿ ಕಾಫಿ ತಿಂಡಿಗಾಗಿ ಒಂದಿಷ್ಟು ಸಂಪಾದಿಸುತ್ತ, ಇಂಟರ್ ಮೀಡಿಯೆಟ್ ಓದಿ ಮುಗಿಸಿದ. ಅದಕ್ಕೂ ಹೆಚ್ಚಿನ ಓದು ಬಲು ಪ್ರಯಾಸ ದ್ದಾಗಿ ತೋರಿತು.

ಒಂದು ವರ್ಷ ತಾನು ಬಯಸಿದ್ದ ಉದ್ಯೋಗ ದೊರಕಿಸಲು ಶತ ಪ್ರಯತ್ನ ಮಾಡುತ್ತಾ ಕಾಲ ಕಳೆದ ಮೇಲೆ ಈಗ ಈ ವೃತ್ತಿ......

ಮನೆಯಲ್ಲಿ ತನಗಿಂತ ವಯಸ್ಸಿನಲ್ಲಿ ನಾಲ್ಕು ವರ್ಷ ಚಿಕ್ಕವನಾದ ತಮ್ಮ, ಆರು ವರ್ಷ ಚಿಕ್ಕವಳಾದ ತಂಗಿ...ಒಬ್ಬನೇ ತಂದೆಯ ಮಕ್ಕಳು ತಾವು ಮೂವರೂ.

ತಂದೆ ಕೇಳಿದ :

"ಅಂತೂ ಬಿ. ಎ. ಮುಗಿಸೋಕೆ ಆಗ್ಲಿಲ್ಲ, ಅಲ್ವೇನೋ!"

"ಅದರ ಯೋಚನೆಯೇ ಇಲ್ಲ ಅಪ್ಪಾ..."

ಜಯದೇವನ ತಮ್ಮನನ್ನು ಆ ವರ್ಷ ಕಾಲೇಜು ಸೇರಿಸಬೇಕೆಂಬ ಮಾತು ಬಂತು. ತಂಗಿಯ ಮದುವೆಯ ಪ್ರಸ್ತಾಪವೂ ಕೂಡಾ.

"ಮದುವೆಗೇನು ಅವಸರ ?"

"ಹಾಗಂದ್ರೇನೋ ಜಯಣ್ಣ. ಹೆಚ್ಚೆಂದರೆ ಇನ್ನು ಒಂದೆರಡು ವರ್ಷ ಕಾಯಬಹುದು. ಆದರೂ ಈಗ್ಲೇ ನೋಡೋದು ಬೇಡ್ವೆ?"

ಜಯದೇವ ಅಲ್ಲವೆನ್ನಲೂ ಇಲ್ಲ, ಹೌದೆನ್ನಲೂ ಇಲ್ಲ.

"ನಾನು ಇವತ್ತೇ ಹೊರಡ್ಬೇಕು ಅಪ್ಪ."

"ಒಂದೆರಡು ದಿನ ಇದ್ದು ಹೋಗು. ನಿಮ್ಮಮ್ಮನ್ನ ಕೇಳಿನೋಡು— ಏನಂತಾಳೊ?"

ಆ ತಂದೆ ಅಮ್ಮ ಎಂದುದು ತನ್ನ ಎರಡನೆಯ ಹೆಂಡತಿಯನ್ನುದ್ದೇಶಿಸಿ...ವಾಸ್ತವವಾಗಿ ಹಿರಿಯ ಮಗನೊಡನೆ ಇನ್ನೂ ಒಂದಷ್ಟು ಮಾತನಾಡಬೇಕೆಂಬುದು ಆತನ ಅಪೇಕ್ಷೆಯಾಗಿತ್ತು. ಮಗಳ ಮದುವೆಯ ಜತೆಯಲ್ಲೇ ಜಯದೇವನಿಗೂ ಒಂದು ಹೆಣ್ಣು ತಂದುಬಿಡಬೇಕೆಂದು ಆತ ಆಶಿಸಿದ್ದ. ಆದರೆ ಮನೆಯಾಕೆ ಸೊಸೆಯನ್ನು ತರುವ ವಿಷಯವಾಗಿ ಉತ್ಸುಕಳಾಗಿರಲಿಲ್ಲ. ಆ ಕಾರಣದಿಂದ ಮಗನೊಡನೆ ಅದರ ಪ್ರಸ್ತಾಪ ಮಾಡುವ ಧೈರ್ಯ ಆ ತಂದೆಗಿರಲಿಲ್ಲ.

ಅಡುಗೆ ಮನೆಗೆ ಹೋಗಿ ಬಾಗಿಲಲ್ಲಿ ನಿಂತು ಜಯದೇವ ಹೇಳಿದ.

"ಅಮ್ಮ, ಇವತ್ತು ಸಾಯಂಕಾಲದ ಬಸ್ಸಿನಲ್ಲಿ ಬೆಂಗಳೂರಿಗೆ ಹೋಗ್ತೀನಿ."

"ಎರಡು ದಿವಸ ಇದ್ದು ಹೋಗಬಾರದೇನೋ" ಎಂದು ಆಕೆಯೂ ಧ್ವನಿ ತೆಗೆದಳು.

"ಇಲ್ಲ ಅಮ್ಮ. ಅಲ್ಲಿಂದ ಹೊರಡೋ ತಯಾರೀನೂ ಮಾಡ್ಬೇಕಲ್ಲ. ಆ ಮೇಲೆ ತಡವಾಗುತ್ತೆ."

"ಹೂನಪ್ಪಾ ಹಾಗಾದರೆ. ನಾನು ಇರೂ ಅಂದರೂ ಯಾಕೆ ಕೇಳ್ತೀಯ ನೀನು?"

"ಹಾಗಲ್ಲವಮ್ಮ—"

ಏನೋ ನೆನಪಾಗಿ ಆ ತಾಯಿ, ಮಗಳನ್ನು ಕರೆದಳು.

"ಸಾಯಂಕಾಲ ಹೊರಡ್ತಾನಂತಲ್ಲೇ ನಿಮ್ಮಣ್ಣ. ತಿಂಡಿಗಿಂಡಿ ಏನೇನಿದೆಯೋ ಅದನ್ನೆಲ್ಲಾ ಇಷ್ಟಿಷ್ಟು ಕಟ್ಕೊಡು."

ಆ ತಂಗಿಯನ್ನು ಕಂಡಾಗಲೆಲ್ಲ ಜಯದೇವನಿಗೆ ತನ್ನ ತಾಯಿಯ ನೆನಪಾಗುತಿತ್ತು. ಆಕೆ ಇದ್ದು ಮತ್ತೊಂದು ಹೆಣ್ಣು ಹೆತ್ತಿದ್ದರೆ, 'ತನ್ನ' ತಂಗಿಯೇ ಒಬ್ಬಳು ದೊರೆಯುತಿದ್ದಳಲ್ಲವೆ?

ಹಲವು ವರ್ಷಗಳ ಕಾಲ ತಾನು ಮನೆಯ ಪಾಲಿಗೆ ಹೊರ ಹೊರಗಿನವನಾಗಿಯೇ ಇದ್ದ ಕಾರಣವೋ ಏನೋ, ಈ ತಂಗಿ ಮತ್ತು ಜಯದೇವನ ನಡುವೆ ಗಾಢವಾದ ಆತ್ಮೀಯತೆ ಬೆಳೆದು ಬಂದಿರಲಿಲ್ಲ. ದೊಡ್ಡಣ್ಣನಾದ ಜಯದೇವ ಮನೆಗೆ ಬಂದಾಗ, ಆತನೊಡನೆ ಬೆಂಗಳೂರಿನ ಚಲಚ್ಚಿತ್ರಗಳ ವಿಷಯ ಆಕೆ ಚರ್ಚಿಸುವುದಿತ್ತು. ಜಯದೇವ ಆಗಾಗ್ಗೆ ಒಳ್ಳೆಯ ಚಲ

ಚಿತ್ರಗಳನ್ನು ನೋಡುತ್ತಿದ್ದನಾದರೂ ಎಲ್ಲ ಪ್ರಶ್ನೆಗಳಿಗೂ ಉತ್ತರವೀಯುವಷ್ಟು ಜ್ಞಾನಿಯಾಗಿರಲಿಲ್ಲ. ಕೆಲವು ವಿಷಯಗಳಲ್ಲಿ ಆತನಿಗಿಂತಲೂ ಆಕೆಗೇ ಹೆಚ್ಚು ಮಾಹಿತಿ ತಿಳಿದಿರುತ್ತಿತ್ತು. "ಇದೆಲ್ಲಾ ಎಲ್ಲಿಂದ ತಿಳಕೊಂಡ್ಯೇ?" ಎಂದು ಕೇಳಿದರೆ, ಸಣ್ಣಣ್ಣ ಮನೆಗೆ ತರುತಿದ್ದ ವಾರಪತ್ರಿಕೆಯನ್ನು ಆಕೆ ತೋರಿಸುತಿದ್ದಳು. ವಾರ ಪತ್ರಿಕೆಗಳಲ್ಲಿ ಸಾಹಿತ್ಯ ವಿಷಯಕವಾದ ಲೇಖನಗಳನ್ನೇ ಹೆಚ್ಚು ಆಸಕ್ತಿಯಿಂದ ಓದುತಿದ್ದ ಜಯದೇವನಿಗೆ ತನ್ನ ಚಲಚ್ಚಿತ್ರ ಜ್ಞಾನ ಕಡಮೆಯೇ ಎನಿಸುತ್ತಿತ್ತು.

ಅಮ್ಮನಿಗೆ ಹೇಳಿದಂತೆ, ಹೊರಡುವ ತಯಾರಿಯೇ ಮುಖ್ಯವಾಗಿದ್ದುದರಿಂದ ಜಯದೇವ ಆ ಸಂಜೆಯೆ ಬೆಂಗಳೂರಿಗೆ ಹೊರಟನೆ?

ಅದು ನಿಜವಾಗಿರಲಿಲ್ಲ.

ಬೆಂಗಳೂರು ಆತನ ಪ್ರೀತಿಯ ಊರು. ಬೆವರು ಹನಿಗಳನ್ನು ಮೂಡಿಸಿ ಮುಖದ ಬಾಲಮುಗ್ಧತೆಯನ್ನು ಅಳಿಸಿ, ಆತ್ಮಾವಲಂಬನದ ಗಾಂಭೀರ್ಯದ ಒಪ್ಪವಿಟ್ಟ ಮಹಾನಗರ. ಕಾಲು ನಡಿಗೆಯಲ್ಲೇ ಸಹಸ್ರಸಾರೆ ಎಷ್ಟೊಂದು ಬೀದಿಗಳನ್ನು ಆತ ಸುತ್ತಿದ್ದ! ಆತನಿಗೆ ವಿದ್ಯಾದಾನ ಮಾಡಿದ್ದ ಫೋರ್ಟ್ ಹೈಸ್ಕೂಲು-ಇಂಟರ್ ಮೀಡಿಯೆಟ್ ಕಾಲೇಜು; ಪ್ರೀತಿಯ ಅಧ್ಯಾಪಕರು, ಪ್ರಾಧ್ಯಾಪಕರು... ಆ ಸಂಬಂಧಗಳನ್ನೆಲ್ಲ ತೊರೆದು ದೂರದ ಊರಿಗೆ ಹೊರಟು ಹೋಗುವುದು ಸುಲಭವಾಗಿರಲಿಲ್ಲ.

ಆ ಒಂದು ವರ್ಷ ತಾನು ಪಾಠಹೇಳಿಕೊಟ್ಟಿದ್ದ ಎರಡು ಮನೆಗಳ ನಾಲ್ವರು ಹುಡುಗರು. ಆ ರಜಾ ದಿನಗಳಲ್ಲಿ ಪಾಠವಿರಲಿಲ್ಲ ನಿಜ. ಆದರೂ ಜಯದೇವನನ್ನು ಹುಡುಕಿಕೊಂಡು ಹುಡುಗರು ಆತನ ಕೊಠಡಿಗೆ ಬರುತಿದ್ದರು. ಆ ಹರಟೆ, ಹುಡುಗರೊಡನೆ ಸಂಜೆ ವಾಯುವಿಹಾರ ಅವನಿಗೆ ಪ್ರಿಯವಾಗಿದ್ದುವು.

ಮೊದಲು ಬೆಂಗಳೂರಿಗೆ ಬಂದಾಗ ತಾನು ಅಡುಗೆಯವನಾಗಿದ್ದ ದೂರದ ಸಂಬಂಧಿಕರ ಸಂಬಂಧ ಈಗೇನೂ ಉಳಿದಿರಲಿಲ್ಲ. ಆದರೆ ಹೈಸ್ಕೂಲು ಅಧ್ಯಯನದ ದಿನಗಳಲ್ಲೇ ಜಯದೇವನಿಗೆ ಬೇರೊಂದು ಮನೆಯ ಪರಿಚಯವಾಗಿತ್ತು. ಅದು ಸಹಪಾಠಿ ವೇಣುಗೋಪಾಲನ ಮನೆ. ವೇಣುವಿನ ತಾಯ್ತಂದೆಯರು ತಮ್ಮ ಮಗನ ಸ್ನೇಹಿತನನ್ನು ಮನೆಯವನಾಗಿಯೇ ಕಂಡರು.

ವೇಣುಗೋಪಾಲನ ತಂಗಿ ಸುನಂದಾ....

ಈ ವರ್ಷ ಎಸ್. ಎಸ್. ಎಲ್. ಸಿ. ಪರೀಕ್ಷೆ ಕಟ್ಟಿ ಆಕೆ ಉತ್ತೀರ್ಣಳಾಗಿದ್ದಳು. ಜಯದೇವನ ತಂಗಿಯ ವಯಸ್ಸೇ ಅವಳಿಗೂ. ಸುರಸುಂದರಿಯಲ್ಲದೇ ಹೋದರೂ ನೋಡಿದವರು ಮತ್ತೆ ನೋಡುವಂತೆ ಮಾಡುವ ಸಾಮರ್ಥ್ಯ ಅವಳಿಗಿತ್ತು. ಆ ಪ್ರೀತಿಯ ಸ್ವರೂಪವೇನೆಂಬುದು ಖಚಿತವಾಗಿ ನಿರ್ಧಾರವಾಗದೇ ಇದ್ದರೂ ಜಯದೇವ ಆಕೆಯನ್ನು ಪ್ರೀತಿಸುತಿದ್ದ.

ಈಗ ಅವರನ್ನು ಬಿಟ್ಟು ಹೋಗುವ ಪ್ರಮೇಯ....

....ಹಿಂದಿನ ರಾತ್ರೆ ರೈಲು ನಿಲ್ದಾಣಕ್ಕೆಂದು ಜಯದೇವ ಜಟಕಾಗಾಡಿ ಹತ್ತಿದ್ದು ವೇಣುಗೋಪಾಲನ ಮನೆಯಿಂದಲೆ. ವೇಣುವೂ ಆತನ ಜತೆಯಲ್ಲಿ ಬಂದಿದ್ದ. ವೇಣುವಿನ ತಂದೆ-ತಾಯಿ ಮತ್ತು ಸುನಂದಾ ಬೀದಿಯವರೆಗೂ ಬಂದು ಜಯದೇವನನ್ನು ಬೀಳ್ಕೊಟ್ಟರು. ಸುನಂದಳ ತುಂಬುಮುಖ ಮುಗುಳುನಗುತ್ತಿತ್ತು. ಕಣ್ಣುಗಳು ಮಾತ್ರ ಅಶ್ರುಭಾರದಿಂದ ಕಿತ್ತು ಬರುತಿದ್ದುವು. ಆ ಮನೆಯವರು ತೋರುತಿದ್ದ ಪ್ರೀತಿಯಿಂದಾಗಿ ಮಾತು ಬಾರದೆ ಮೂಕನಾಗಿದ್ದ ಜಯದೇವ, ಸುನಂದಳ ಹೃದಯದೊಳಗಿನ ಅಳಲನ್ನು ಗುರುತಿಸದೆ ಇರಲಿಲ್ಲ.

................

ಮೋಟಾರು ಬಸ್ಸು ಓಡುತಿತ್ತು. ನಡುವೆ ನಿಂತು ಯಾರನ್ನೋ ಇಳಿಸಿ ಯಾರನ್ನೋ ಹತ್ತಿಸಿಕೊಂಡು ಮುಂದುವರಿಯುತಿತ್ತು. ಆ ಧೂಳೋ ಅಸಾಧ್ಯ. ಜಯದೇವನ ಮೈಯ ಒಂದು ಭಾಗಕ್ಕೆಲ್ಲ ಧೂಳಿನ ಸ್ನಾನವಾಗದೆ ಇರಲಿಲ್ಲ. ಎಂದೋ ಒಮ್ಮೆ ಸುನಂದಾ ಈ ಬಣ್ಣ ಚೆನ್ನಾಗಿದೆ ಎಂದಿದ್ದಳೆಂದು, ಬಿಸ್ಕತ್ತು ಬಣ್ಣದ ಜುಬ್ಬವನ್ನೇ ಜಯದೇವ ಹೊರಡುವಾಗ ಹಾಕಿಕೊಂಡಿದ್ದ. 'ಬಿಳೀ ಜುಬ್ಬ ಹಾಕಿಕೊಳ್ಳದಿದ್ದುದೇ ಮೇಲಾಯಿತೆ'ಂದೂ ಆತ ಈಗ ಸಮಾಧಾನ ಪಟ್ಟುಕೊಂಡ.

ಮತ್ತೆ ಗಾಡಿ ಚಲಿಸಿದಂತೆಯೇ ಯೋಚನೆಗಳು. ಒಂದಕ್ಕೊಂದು ಸಂಬಂಧವಿರಲಿಲ್ಲ. ಸಾವಿರ ತುಂಡುಗಳಿಗೆ ತೇಪೆಹಾಕಿ ಮಾಡಿದಂತಿತ್ತು ಯೋಚನೆಗಳ ಆ ಸುರುಳಿ.

ಓಡುತಿದ್ದ ಗಾಡಿಯನ್ನು ಬೆನ್ನಟ್ಟುತಿದ್ದ ಸೂರ್ಯನ ಕೈಯೇ ಮೇಲಾಯಿತೇನೋ ಎಂಬಂತೆ, ಬಿಸಿಲಿನ ಝಳ ಒಳಗೆ ಕುಳಿತಿದ್ದವರಿಗೆ

ತಾಕಿತು. ಜಯದೇವನ ಮೈ ಬೆವರೊಡೆಯಿತು. ಎರಡನೆಯ ಸಾಲಿನಲ್ಲಿದ್ದ ಎಳೆಯ ಮಗುವೊಂದು ರುಯ್ಯೋ ಎಂದು ಅಳತೊಡಗಿತು. ಮಾರ್ಗದಲ್ಲಿದ್ದೊಂದು ತಗ್ಗನ್ನು ದಾಟುವ ಗದ್ದಲದಲ್ಲಿ ಮೋಟಾರು ಏರಿ ಇಳಿದಾಗ ಹಿಂದಿನ ಭಾಗದಲ್ಲಿದ್ದವರೊಬ್ಬರು ಯಾರೋ ಹಿಂದೂಸ್ಥಾನೀ ಭಾಷೆಯಲ್ಲಿ ಏನೋ ಕೆಟ್ಟ ಮಾತೆಂದರು. ಇನ್ನೊಬ್ಬರು ಖೋ ಖೋ ಎಂದು ನಕ್ಕರು. ಒಬ್ಬ ಬೀಡಿಯನ್ನು ಬಾಯಿಗಿಟ್ಟು ಕಡ್ಡಿಗೀರಿದ. ಕಂಡಕ್ಟರೆಂದ:

"ಯಾರ್ರೀ ಅದು ? ಸೇದ್ಬೇಡ್ರೀ...ಬೋರ್ಡ್ರು ಕಾಣ್ಸೋಲ್ವೇನ್ರಿ ?"

"ಬೋರ್ಡ್ರು!" ಎಂದು ಯಾರೋ ಅಣಕಿಸುವ ಧ್ವನಿಯಲ್ಲಿ ಅಂದರು.

ಇನ್ನೊಬ್ಬ ಸಿಗರೇಟು ಹೊರತೆಗೆದ.

"ಇದೇನು ಸರಕಾರಿ ಬಸ್ಸು ಕೆಟ್ಹೋಯ್ತು? ಬೆಂಕಿಪೊಟ್ಣ ಕೊಡ್ರೀ ಇಲ್ಲಿ ಸ್ವಲ್ಪ."

ಬೇಡವೆಂದರೂ ಜಯದೇವನ ಕಿವಿಗಳಿಗೆ ಈ ಮಾತುಗಳೆಲ್ಲ ಬಂದು ತಾಕುತ್ತಿದ್ದುವು. ದೇಹಕ್ಕೂ ಮೆದುಳಿಗೂ ಆಯಾಸವಾದಹಾಗೆ ತೋರಿತು. ತೂಕಡಿಕೆ ಬಂತು... ಅದೆಲ್ಲಾ ನಿಮಿಷ ನಿದ್ದೆ. ಎಚ್ಚರ, ನಿದ್ದೆ, ಎಚ್ಚರ.

ಅಷ್ಟರಲ್ಲೇ ಊರು ಸಮೀಪಿಸಿತು. ಒಂದು ಘಂಟೆಯ ಪ್ರಯಾಣ. ಒಂಭತ್ತೂವರೆ ಆಗಿರಬೇಕು ಆಗ.

ಅಲ್ಲೇ, ಕಲ್ಲಿನ ಹಲಿಗೆಯಮೇಲೆ ಊರಿನ ಹೆಸರನ್ನು ಕೊರೆದು ಬರೆದಿದ್ದರು. ಜಯದೇವ, ಬದುಕಿನ ಹೊಸತೊಂದು ಅಧ್ಯಾಯವನ್ನು ಆರಂಭಿಸಬೇಕಾದ ಊರು. ತಕ್ಕಮಟ್ಟಿಗೆ ವಿಶಾಲವಾಗಿಯೇ ಇದ್ದ ನಿಲ್ದಾಣದಲ್ಲಿ ಬಸ್ ನಿಂತಿತು. ಬರುತ್ತೇನೆಂದು ಯಾರಿಗೂ ಜಯದೇವ ಬರೆದಿರಲಿಲ್ಲ. ಆದರೂ ಬಸ್ಸಿನಿಂದಿಳಿಯುತ್ತ ದೃಷ್ಟಿ ಅತ್ತಿತ್ತ ಓಡಾಡಿತು. ಎಷ್ಟು ನೋಡಿದರೇನು? ಅಪರಿಚಿತ ಊರಿನಲ್ಲಿ ಪರಿಚಿತ ಮುಖ ಎಲ್ಲಿಂದ ಕಾಣಿಸಬೇಕು?

ಜಯದೇವ, ಹಾಸಿಗೆ-ಚೀಲ ಮತ್ತು ತನ್ನ ಉಡುಗೆಯಿಂದ ಧೂಳು ಜಾಡಿಸಿದ. ಆ ನಿಲ್ದಾಣದಲ್ಲೂ ಉಡುಪಿಮಾವನ ಒಂದು ಹೋಟೆಲಿತ್ತು. ನೀರು ಕೇಳಿ ಇಸಗೊಂಡು ಮುಖ ತೊಳೆದ. ಒಂದು ಕಪ್ ಕಾಫಿ ಕುಡಿದ.

ದಣಿವಾರಿದಾಗ ಜಯದೇವ ಕಾಫಿ ಕೊಟ್ಟ ಹುಡುಗನನ್ನು ಕೇಳಿದ:

"ಏನಪ್ಪಾ, ಇಲ್ಲಿ ಮಾಧ್ಯಮಿಕ ಶಾಲೆ ಎಲ್ಲಿದೆ?"

ಬೆರಗಾದವನಂತೆ ಕ್ಷಣ ಹೊತ್ತು ನಿಂತ ಆ ಹುಡುಗ.

"ಇಲ್ಲೇ ಮೇಲ್ಗಡೆ. ಅರ್ಧ ಫರ್ಲಾಂಗ್ ಕೂಡಾ ಇಲ್ಲ."

ಅಷ್ಟು ಹೇಳಿಯೂ ಹುಡುಗ ಜಯದೇವನನ್ನು ನೋಡುತ್ತಲೇ ಇದ್ದ.

"ಯಾಕೆ ಹಾಗೆ ನೋಡ್ತೀಯೋ?"

ಹುಡುಗನಿಗೆ ಪೆಚ್ಚು ಪೆಚ್ಚಾಯಿತು.

"ನೀವು ಮೇಷ್ಟ್ರೇ ಸಾರ್?"

ಇನ್ನೂ ಮೊದಲ ಪಾಠ ಹೇಳುವುದಕ್ಕಿಲ್ಲ. ಅಷ್ಟರಲ್ಲೇ—

"ಹ್ಯಾಗೆ ಗೊತ್ತಾಯ್ತು ನಿಂಗೆ?"

"ಶಾಲೆ ಎಲ್ಲೀಂತ ನೀವೇ ಕೇಳ್ಲಿಲ್ವೆ? ಹೊಸಮೇಷ್ಟ್ರು ಬರ್ತಾರೇಂತ ಹುಡುಗರೂ ಅಂತಿದ್ರು."

'ಹೊಸ ಮೇಷ್ಟ್ರ'ನ್ನು ಮೊತ್ತಮೊದಲು ನೋಡಿದವನು ತಾನು ಎಂಬ ಹೆಮ್ಮೆಯಿತ್ತು ಆ ಧ್ವನಿಯಲ್ಲಿ.

"ನೀನು ಸ್ಕೂಲಿಗೆ ಹೋಗ್ತೀಯಾ?"

ಹುಡುಗನ ಮುಖ ಒಮ್ಮೆಲೆ ಕಪ್ಪಿಟ್ಟು ಧ್ವನಿ ಕುಂಠಿತವಾಯಿತು.

"ಇಲ್ಲಾ ಸಾರ್..."

# ೨

ತನ್ನ ಸಾಮಾನುಗಳನ್ನು ತಾನೇ ಎತ್ತಿಕೊಂಡು ಜಯದೇವ ಶಾಲೆಯನ್ನು ಸಮೀಪಿಸಿದ. ಅದು ಮಂಗಳೂರು ಹೆಂಚಿನ ತಗ್ಗು ಗೋಡೆಯ ಹಳೆಯ ಕಟ್ಟಡ.

ಶಾಲೆಗೆ ಹುಡುಗರು ಅದೇ ಆಗ ಬರತೊಡಗಿದ್ದರು. ಅವರೆಲ್ಲರ ಗಮನವನ್ನು ಜಯದೇವ ಸಹಜವಾಗಿಯೇ ಸೆಳೆದ. ಈತ ಯಾರಿರಬಹುದು ಎಂಬ ಕುತೂಹಲ ಹುಡುಗರಿಗೆ. 'ಹೊಸ ಉಪಾಧ್ಯಾಯರು' ಎಂದು ಕೆಲವರೆಂದರೆ, 'ಯಾರೋ ಕಾಲೇಜ್ ವಿದ್ಯಾರ್ಥಿ ಇರಬೇಕು' ಎಂದು ಬೇರೆ ಕೆಲವರು. ಒಬ್ಬಿಬ್ಬರು ಹುಡುಗರು ಮುಂದೆ ಬಂದು, ಜಯದೇವನ ಹಾಸಿಗೆ ಮತ್ತು ಚೀಲಗಳನ್ನೆತ್ತಿಕೊಳ್ಳಲು ಕೈಚಾಚಿದರು. ಆದರೆ ಸ್ವಾವಲಂಬಿ ಜಯದೇವನಿಗೆ ಯಾರ ಸಹಾಯವೂ ಬೇಕಿರಲಿಲ್ಲ. ಬೇರೆ ಕೆಲ ಹುಡುಗರು, ಶಾಲೆಯೊಳಗೆ ಮೂಲೆಯ ಕೊಠಡಿಯಲ್ಲಿ ಏನನ್ನೊ ಬರೆಯುತ್ತ ಕುಳಿತಿದ್ದ ಮುಖ್ಯೋಪಾಧ್ಯಾಯರಿಗೆ,ಅಪರಿಚಿತರೊಬ್ಬರು ಬರುತ್ತಿದ್ದ ಸುದ್ದಿ ತಿಳಿಸಿದರು.

ಮುಖ್ಯೋಪಾಧ್ಯಾಯರೆದ್ದು ಬಂದರು ಬಾಗಿಲಬಳಿಗೆ. ವಯಸ್ಸಿನಲ್ಲಿ ತಮಗಿಂತಲೂ ಮೂವತ್ತು ವರ್ಷ ಚಿಕ್ಕವನಂತೆ ತೋರುತ್ತಿದ್ದ ಯುವಕ. ಆತನೇ ತಮ್ಮ ಶಾಲೆಯ ಹೊಸ ಉಪಾಧ್ಯಾಯರೆಂಬುದರಲ್ಲಿ ಅವರಿಗೆ ಸಂದೇಹವಿರಲಿಲ್ಲ.

"ನಮಸ್ಕಾರ, ಬನ್ನಿ!"

— ಎನ್ನುತ್ತ 'ಹೆಡ್ ಮೇಷ್ಟ್ರ' ರಂಗರಾಯರು ಮುಗುಳು ನಕ್ಕು ಸ್ವಾಗತ ಬಯಸಿದರು.

ಎರಡು ಕೈಯಲ್ಲೂ 'ಭಾರ'ಗಳಿದ್ದುವು. ಅವುಗಳನ್ನು ಕೆಳಗಿಳಿಸದೆ ಕೈಜೋಡಿಸಿ ನಮಸ್ಕರಿಸುವುದು ಸಾಧ್ಯವಿರಲಿಲ್ಲ. ಆ ಕಾರಣದಿಂದ ತಲೆಯನ್ನಷ್ಟೆ, ಬಾಗಿಸಿ ಜಯದೇವ "ನಮಸ್ಕಾರ" ಎಂದ.

ಆದರೆ ಅವನ ಮನಸ್ಸು ಒಂದು ಪ್ರಶ್ನೆ ಕೇಳಿತು : ಇವರು ಯಾರಿರಬಹುದು? ಶುಭ್ರವಾದ ಧೋತರ, ಷರಟು, ಸ್ವಲ್ಪ ಮಾಸಿದ ಕಂದು ಬಣ್ಣದ ಮುಚ್ಚುಕಾಲರಿನ ಕೋಟು, ಕೆಲವೇ ಕೂದಲುಗಳಿದ್ದ ಬಕ್ಕತಲೆ... ಇವರೇ

ಮುಖ್ಯೋಪಾಧ್ಯಾಯರಿರಬಹುದೆ? ಸ್ವತಃ ಮುಖ್ಯೋಪಾಧ್ಯಾಯರೇ ಹೊರ ಬಂದು ತಾವೇ ಮೊದಲು ತನಗೆ ನಮಸ್ಕರಿಸಿದರೆ?

ಆ ಯೋಚನೆಯಿಂದಲೆ ಜಯದೇವನ ಮುಖ ಕೆಂಪಗಾಯಿತು.

"ಇವರ ಸಾಮಾನು ಆಫೀಸು ರೂಮ್ನಲ್ಲಿ ಇಡಪ್ಪ."

—ಒಬ್ಬ ಹುಡುಗನಿಗೆ ಅವರೇ ಕೊಟ್ಟ ನಿರ್ದೇಶ.

ಜಯದೇವ ಜುಬ್ಬದ ಜೇಬಿನಿಂದ ಕರವಸ್ತ್ರ ಹೊರತೆಗೆದು ಮುಖ ಒರೆಸಿಕೊಂಡು ಹೇಳಿದ:

"ನಾನು ಬೆಂಗಳೂರಿಂದ ಬಂದಿದೀನಿ."

"ಗೊತ್ತು. ಮಿ. ಜಯದೇವ—ಅಲ್ವೆ? ಅನುಜ್ಞೆಯ ಪ್ರತಿ ಆವತ್ತೆ ಬಂತು."

"ಹೆಡ್ಮೇಷ್ಟ್ರು—"

"ನಾನೇ. ರಂಗರಾವ್ ಅಂತ. ಒಳಗ್ಬನ್ನಿ ಮಿ. ಜಯದೇವ್."

ಜಯದೇವ ನಿರೀಕ್ಷಿಸಿದ್ದುದಕಿಂತಲೂ ನೂರುಪಾಲು ಮಿಗಿಲಾಗಿತ್ತು ಮುಖ್ಯೋಪಾಧ್ಯಾಯರು ತೋರಿದ ಆತ್ಮೀಯತೆ. ಆತನ ಹೃದಯ ಪ್ರಸನ್ನವಾಯಿತು. ಪಯಣದ ಯಾವ ಬಳಲಿಕೆಯೂ ಉಳಿಯಲಿಲ್ಲ.

ಪುಟ್ಟ ಮೇಜು. ಅದರ ಸುತ್ತಲೂ ನಾಲ್ಕು ಬಡಕಲು ಕುರ್ಚಿಗಳು. ಮುಖ್ಯ ಕುರ್ಚಿಯ ಹಿಂದೆ ಗೋಡೆಯ ಮೇಲೆ, ಅವಿಭಕ್ತ ಇಂಡಿಯಾದೇಶದ ಹಳೆಯ ನಕಾಶೆಯೊಂದು [ಭಾರತ ಸ್ವತಂತ್ರವಾಗಿದ್ದರೇನಂತೆ?] ತೂಗಾಡು ತಿತ್ತು. ಯಾವು ಯಾವುದೋ ಪುಸ್ತಕಗಳು ತುಂಬಿದ್ದೊಂದು ಕಪಾಟು. ಅದರ ಗಾಜುಗಳು ಒಡೆದಿದ್ದುವು. ಮೇಲುಗಡೆ, ರಾಜದಂಡವನ್ನು ಹಿಡಿದ ಪಂಚಮ ಜಾರ್ಜರ ಹಳೆಯ ಬಣ್ಣದ ಚಿತ್ರವಿತ್ತು; ಅದರ ಗಾಜೂ ಒಡೆದಿತ್ತು-ಸಾಂಕೇತಿಕವಾಗಿ! ಇತ್ತ ಜಯಚಾಮರಾಜರು ಬಾಯ್ ಸ್ಕೌಟು ಆಗಿದ್ದಾಗ ತೆಗೆದ ಭಾವಚಿತ್ರ. ಬಾಗಿಲ ಮೇಲುಭಾಗದಿಂದ ಮಹಾತ್ಮಾ ಗಾಂಧಿಯವರೂ ಜವಹರಲಾಲರೂ ನಗುತ್ತಿದ್ದರು. ಬೆಂಗಳೂರು ಪ್ರೆಸ್ಸಿನ ಕ್ಯಾಲೆಂಡರೊಂದು ಜೂನ್ ತಿಂಗಳನ್ನು ಸೂಚಿಸುತಿತ್ತು.

"ಬನ್ನಿ ಜಯದೇವ್. ಇದೇ ನಮ್ಮ ಆಫೀಸು ರೂಮು. ಟೀಚರ್ಸ್ ರೂಮು ಇದೇ. ಬನ್ನಿ—ಕುಳಿತುಕೊಳ್ಳಿ."

ಟೀಕ್–ಟಾಕ್ ಟೀಕ್–ಟಾಕ್....ಜಯದೇವ ತಲೆ ಎತ್ತಿ ನೋಡಿದ. ರಾಜಾಧಿರಾಜರ ಮೇಲೆ ಗೋಡೆಯಲ್ಲಿ, ಹಳೆಯಕಾಲದ ಹತ್ತುರೂಪಾಯಿಯ ಜಪಾನೀ ಗೋಡೆ ಗಡಿಯಾರವೊಂದಿತ್ತು. 'ನನ್ನನ್ನು ನೀನು ನೋಡಲೇ ಇಲ್ಲ' ಎಂದು ಮುನಿಸಿಕೊಂಡವರ ಹಾಗೆ ಜಯದೇವನನ್ನೇ ಅದು ನೋಡುತಿತ್ತು.

ಬೆಂಗಳೂರಿನಲ್ಲಿ ಅಂತಹ ನೋಟ ಸಿಗುವುದು ಸಾಧ್ಯವಿರಲಿಲ್ಲ. ಮಾದರಿ ಶಾಲೆಯೆಂದು ಬೋರ್ಡು ತಗಲಿಸಿ, ಒಳಗೆ ಹುಡುಗರನ್ನೆಲ್ಲ ನೆಲದ ಮೇಲೆ ಕುಳ್ಳಿರಿಸಿ ಕಿರಿಚಿಕೊಂಡು ಪಾಠ ಹೇಳುವುದಿರಬಹುದಾದರೂ ಇಲ್ಲಿದ್ದ ಈ ಗಡಿಯಾರ, ಪಂಚಮ ಜಾರ್ಜರು, ಈ ವಾತಾವರಣ....ಇದೊಂದೂ ಬೆಂಗಳೂರಿನಲ್ಲಿ ಹೀಗೆ ಇರಲಿಲ್ಲ.

"ಏನು, ಗಡಿಯಾರ ನೋಡ್ತಿದೀರಾ? ಅದು ಹದಿನೈದು ನಿಮಿಷ ಹಿಂದಿದೆ," ಎಂದರು ಮುಖ್ಯೋಪಾಧ್ಯಾಯರು.

ಜಯದೇವ ಉತ್ತರವೀಯದೆ ಸಣ್ಣನೆ ನಕ್ಕ. ಗಡಿಯಾರ ಒಂದೇ ಎಂದೇನು ? ಇಲ್ಲಿ ಎಲ್ಲವೂ ಹಿಂದಿದ್ದುವು—ಬಲು ಹಿಂದೆ. ಇಲ್ಲಿ ಯಾವುದೂ ಚಲಿಸುತಿದ್ದಂತೆಯೇ ತೋರಲಿಲ್ಲ. ಚಲಿಸಿದರೂ ಆ ಚಲನೆ ಬಲು ನಿಧಾನ ವಾಗಿತ್ತು.

'ಹೊಸಮೇಷ್ಟ್ರು' ಬಂದ ಸುದ್ದಿ ಶಾಲೆಯಲ್ಲೆಲ್ಲಾ ಹಬ್ಬಿತು. ವಿದ್ಯಾರ್ಥಿಗಳು ಇಲ್ಲದ ನೆಪ ಮಾಡಿಕೊಂಡು ಆಫೀಸು ರೂಮಿನ ಎದುರುಗಡೆಯಿಂದ ಹಾದುಹೋದರು. ಬಾಗಿಲ ಹೊರಗೆ ನಿಂತು ಬಾಗಿಬಾಗಿ ನೋಡಿದರು. ಜಯದೇವನ ಬೆನ್ನುಷ್ಟೆ ಕಾಣಿಸುತಿತ್ತು. ಆತ ಅತ್ತಿತ್ತ ತಿರುಗಿದನೆಂದರೆ ಮುಖವೂ ಕೂಡಾ....ಬಳೆಗಳ, ಕಿಸಕ್ಕನೆ ನಕ್ಕ, ಸದ್ದು. ಹುಡುಗಿಯರ ಗುಂಪೂ ಅತ್ತಿಂದಿತ್ತ ಹಾದು ಹೋಯಿತು. ಜಯದೇವ ಅವರನ್ನು ನೋಡಿದ: ಹಲವು ಲಂಗಗಳು, ಕೆಲವು ಸೀರೆಗಳು.

ರಂಗರಾಯರು ನಕ್ಕು ನುಡಿದರು.

"ಹೊಸಮೇಷ್ಟ್ರು ಬಂದಿದಾರೇಂತ ಹುಡುಗರೆಲ್ಲಾ ಖುಷೀಲಿದಾರೆ."

—ಆದರೆ ನಾಳೆಯ ದಿನ ತಾನು ಪಾಠಹೇಳಲು ತೊಡಗಿದಾಗ, ಹುಡುಗರಿಗೆಲ್ಲಿ ನಿರಾಶೆಯಾಗುವುದೋ ಎಂದು ಜಯದೇವನಿಗೆ ಭಯವಾಯಿತು.

"ಬೆಂಗಳೂರೇ ನಿಮ್ಮ ಸ್ವಂತ ಊರೇನು?"

"ಅಲ್ಲ ಸಾರ್. ನಾನು ಬೆಳೆದಿದ್ದು ಬೆಂಗಳೂರಲ್ಲಿ. ಹುಟ್ಟಿದ್ದು ಕಾನ ಕಾನ ಹಳ್ಳಿ-ಕನಕಪುರ."

"ಹೊಸ ಹೆಸರು! ಗೊತ್ತು ಗೊತ್ತು—ಕೇಳಿದೀನಿ... ಇನ್ನೇನು ಇದ್ದೇ ಇದೆಯಲ್ಲ ಊರೂರು ಸುತ್ತೋ ಕೆಲಸ! ಉಪಾಧ್ಯಾಯ ವೃತ್ತಿ ಅಂದ್ಮೇಲೆ."

ಆ ಮಾತಿನಲ್ಲಿ ಅಂತಹ ಸುತ್ತಾಟ ಒಳಿತು ಎಂಬ ಭಾವನೆ ಇತ್ತೋ ಅಥವಾ ಉಪಾಧ್ಯಾಯ ವೃತ್ತಿಯು ಹಣೇಬರಹವೇ ಇಷ್ಟು ಎಂಬ ಧ್ವನಿ ಇತ್ತೋ, ಜಯದೇವನಿಗೆ ಸ್ಪಷ್ಟವಾಗಲಿಲ್ಲ. ಆತ ಏನೂ ಪ್ರತ್ಯುತ್ತರ ಕೊಡದೆ ತುಟಿಗಳ ಮೇಲೊಂದು ನಗು ತೇಲಿಸುತ್ತ ಮೌನವಾಗಿ ಕುಳಿತ.

"ಈ ಮೊದಲು ಎಲ್ಲಾದರೂ ಉಪಾಧ್ಯಾಯರಾಗಿದ್ರಾ ಮಿ. ಜಯದೇವ್?"

"ಇಲ್ಲ ಸಾರ್. ಇದೇ ಮೊದಲನೆಯ ಅನುಭವ. ಹುಡುಗರಿಗೆ ಖಾಸಗಿ ಪಾಠ ಹೇಳಿದ್ದು ಎಷ್ಟೋ ಅಷ್ಟೇ."

"ಅಷ್ಟಿದ್ದರೆ ಸಾಕು. ನಾನು ಉಪಾಧ್ಯಾಯನಾದಾಗ ಆ ಅನುಭವವೂ ನನಗಿರಲಿಲ್ಲ."

ಧೈರ್ಯತುಂಬುವ ಆ ಸತ್ಯ ಸಂಗತಿ ಪರಿಣಾಮಕಾರಿಯಾಗಿತ್ತು.

ಬಿಳಿಯ ಟೋಪಿ ಧರಿಸಿದ್ದ, ಹದಿಮೂರು ಹದಿನಾಲ್ಕು ವರ್ಷ ಪ್ರಾಯದ, ಚುರುಕಾದ ಹುಡುಗನೊಬ್ಬ ಆಫೀಸು ರೂಮಿನೆದುರು ನಿಂತು ಮುಖ್ಯೋಪಾಧ್ಯಾಯರನ್ನು ಉದ್ದೇಶಿಸಿ, "ಟೈಮು ಎಷ್ಟು ಸಾರ್? ಫಸ್ಟ್ ಬೆಲ್ ಹೊಡೀಲೆ ಸಾರ್?" ಎಂದು ಕೇಳಿದ. ಗೋಡೆಗಡಿಯಾರವನ್ನು ನೋಡಿ ಸಮಯ ತಿಳಿದುಕೊಳ್ಳಲು ಹುಡುಗರೂ ಸಿದ್ಧರಿರಲಿಲ್ಲ! ರಂಗರಾಯರು, ಎದೆಯತ್ತ ಕೈ ಒಯ್ದು ಸರಪಳಿಯನ್ನು ಮುಟ್ಟಿ ಗಡಿಯಾರವನ್ನು ಹೊರಕ್ಕೆಳೆದರು.

"ಇನ್ನು ಐದು ನಿಮಿಷ. ಆ ಮೇಲೆ ಹೊಡೀಪ್ಪಾ."

ಹುಡುಗ ಆಗ ಗೋಡೆ ಗಡಿಯಾರವನ್ನು ನೋಡಿದ. ಐದು ನಿಮಿಷಗಳ ಎಣಿಕೆಯ ಮಟ್ಟಿಗೆ ಅದನ್ನು ಆತ ನಂಬುವ ಹಾಗಿತ್ತು!

"ಹುಡುಗರು ಒಳ್ಳೆಯವರು. ನಿಮಗೆ ಈ ಜಾಗ ಊರು ಹಿಡಿಸುತ್ತೆ. ಯುವಕರಾದ ಮೇಷ್ಟ್ರನ್ನ ಕಂಡರೆ ಹುಡುಗರಿಗೂ ಇಷ್ಟ."

"ಏನೋ ಸಾರ್. ನಾನೇ ಶಾಲೆ ಸೇರೋಕೆ ಬಂದ ಹುಡುಗನ ಹಾಗಿದೀನಿ!"

ರಂಗರಾಯರಿಗೆ ನಗುಬಂತು.

"ನಿಜವಾಗಿ ನೋಡಿದರೆ ನಿಮಗಿನ್ನೂ ಓದೋ ವಯಸ್ಸು. ಅಲ್ಲ ಅಂತೀರಾ?"

"ಏನ್ಮಾಡೋಣ ಹೇಳಿ? ಕೋರ್ಸ್ ಮುಗಿಸೋಕೆ ಆಗ್ಲಿಲ್ಲ."

"ಅದಕ್ಕೇನು? ಮುಂದೆ ಪೂರ್ತಿ ಮಾಡುವಿರಂತೆ... ಇಂಟರ್ ಯಾವ ವರ್ಷ ಮಾಡ್ಕೊಂಡ್ರಿ?"

"ಹೋದ ವರ್ಷವೇ ಸಾರ್."

"ನಾನೂ ಹಾಗೇ ಅಂದ್ಕೊಂಡೆ."

ಪಾಠಗಳು ಆರಂಭವಾಗುವ ಹೊತ್ತಾದರೂ ಬೇರೆ ಉಪಾಧ್ಯಾಯರ ಸುಳಿವೇ ತೋರದಿದ್ದುದು ಜಯದೇವನಿಗೆ ಸೋಜಿಗವನ್ನುಂಟು ಮಾಡಿತು.

"ಈವರೆಗೂ ಸ್ಟಾಫ್‌ನಲ್ಲಿ ಎಷ್ಟು ಜನ ಸಾರ್?"

"ಇಬ್ಬರು. ನೀವೇ ಹೊಸ ನೇಮಕ. ಇನ್ನು ಮುಂದೆ ಮೂರು ಜನ.

"ಇನ್ನೊಬ್ಬರು ಬಂದಿಲ್ವಲ್ಲಾ–ಅದಕ್ಕೆ ಕೇಳಿದೆ."

ರಂಗರಾಯರು ಕಿಟಕಿಯಿಂದ ಹೊರನೋಡಿದರು. ಯಾರೂ ಕಾಣಿಸಲಿಲ್ಲ.

"ಬರ್ತಾರೆ. ಬರೋ ಹೊತ್ತಾಯ್ತು."

ಆ ಮಾತಿನಲ್ಲಿ ಅವ್ಯಕ್ತವಾಗಿ ಇದ್ದ ಬೇಸರ ಜಯದೇವನ ಸೂಕ್ಷ್ಮ ನೋಟಕ್ಕೆ ಒಳಗಾಗದೆ ಹೋಗಲಿಲ್ಲ.

...ಕಿವಿಯೊಡೆಯುವ ಹಾಗೆ ಢೊಂಯ್ ಢೊಂಯ್ ಢೊಂಯ್ ಎಂದು ಗಂಟೆ ಬಾರಿಸಿತು.

ಆ ಸದ್ದು ನಿಂತ ಎರಡು ನಿಮಿಷಗಳಲ್ಲೆ ಸೂಟು ಧರಿಸಿದವರೊಬ್ಬರು ಒಳಬಂದರು. ಬರುತ್ತಲೇ ಜಯದೇವನನ್ನು ಅವರು ನೋಡಿದರು. ಹ್ಯಾಟ್ ತೆಗೆದು ಕಪಾಟದ ಮೇಲಿರಿಸಿದರು. ವಯಸ್ಸು ನಾಲ್ವತ್ತು ಆದ ಹಾಗಿತ್ತು. ನಮಸ್ಕಾರ ಚಮತ್ಕಾರಗಳೊಂದೂ ಇರಲಿಲ್ಲ.

ಜಯದೇವ ಕುತೂಹಲದಿಂದ ಅವರನ್ನೇ ನೋಡಿದ. ಅವರು ಬೀರುವಿ

ನೊಳಗಿನಿಂದ ಮೂರು ನಾಲ್ಕು ಪುಸ್ತಕಗಳನ್ನೆತ್ತಿಕೊಂಡು ಹೊರಡಲು ಸಿದ್ಧರಾದರು.

ಅದನ್ನು ಗಮನಿಸಿದ ಮುಖ್ಯೋಪಾಧ್ಯಾಯರೆಂದರು:

"ಮಿಸ್ಟರ್ ನಂಜುಂಡಯ್ಯ, ಒಂದ್ನಿಮಿಷ."

ಹೊರಟಿದ್ದ ನಂಜುಂಡಯ್ಯ ತಡೆದು ನಿಂತು ತಿರುಗಿ ನೋಡಿದರು.

"ಇವರು ಮಿಸ್ಟರ್ ಜಯದೇವ್. ನಮ್ಮ ಸ್ಟಾಫಿನ ಹೊಸ ಸದಸ್ಯ... ಇವರು ಮಿಸ್ಟರ್ ನಂಜುಂಡಯ್ಯ. ನಮ್ಮ ಸಹಾಯಕ ಮುಖ್ಯೋಪಾಧ್ಯಾಯರು."

"ಸಂತೋಷ! Pleased to meet you!"

–ಎನ್ನುತ್ತ ನಂಜುಂಡಯ್ಯ ಕೈ ಮುಂದಕ್ಕೆ ಚಾಚಿದರು. ಜಯದೇವ ನೆದ್ದು ಮುಗುಳ್ನಗುತ್ತ ಅವರೊಡನೆ ಕೈಕುಲುಕಿದ.

ನಂಜುಂಡಯ್ಯ ರಂಗರಾಯರತ್ತ ತಿರುಗಿದರು.

"ಅದೇನು, ನನ್ನನ್ನ ಸಹಾಯಕ ಮುಖ್ಯೋಪಾಧ್ಯಾಯ ಮಾಡಿದ್ರಲ್ಲಾ?"

"ತಪ್ಪೇನು ನಂಜುಂಡಯ್ಯ? ಈವರೆಗೆ ಇಬ್ರೆ ಇದ್ವಿ. ನೀವು ಬರೀ ಅಸಿಸ್ಟೆಂಟ್ ಆಗಿದ್ರಿ. ಇನ್ನು ನಾವು ಮೂವರು. ಅಂದಮೇಲೆ ನೀವು ಅಸಿಸ್ಟೆಂಟ್ ಎಚ್. ಎಮ್. ಅಲ್ವೆ?'

"ಸರಿ! ಸರಿ!"

ಅವರಿಬ್ಬರನ್ನೂ ಜಯದೇವ ನೆಟ್ಟ ದೃಷ್ಟಿಯಿಂದ ನೋಡಿದ; ಆ ಸಂಭಾಷಣೆಯನ್ನು ಪೃಥಕ್ಕರಿಸಿದ. ರಂಗರಾಯರ ಮಾತಿನಲ್ಲಿ ಸೂಕ್ಷ್ಮ ವ್ಯಂಗ್ಯವಿದ್ದರೆ, ಅದನ್ನು ತಿಳಿದುಕೊಳ್ಳಲಾರದೆ ಹುಟ್ಟಿದ ಸಮಾಧಾನ ನಂಜುಂಡಯ್ಯನವರ ಮಾತಿನಲ್ಲಿತ್ತು.

ನಂಜುಂಡಯ್ಯ ಆತ್ಮಸಂತೋಷದಿಂದ ನಗುತ್ತಲೇ ಇದ್ದು, ಜಯದೇವನನ್ನು ಮೇಲಿನಿಂದ ಕೆಳಗಿನವರೆಗೂ ದೃಷ್ಟಿ ಹಾಯಿಸಿ ನೋಡಿದರು... ಬಸ್ ಪ್ರಯಾಣದಿಂದ ಮಲಿನವಾದ ಬಟ್ಟೆ...ಶಾಲೆಗೆ ಬರುವಾಗ ಬದಲಾಯಿಸಬೇಕೆಂದು ಕೂಡಾ ತೋರಲಿಲ್ಲವೇನೋ ಆತನಿಗೆ! ... ಕಡುಬಡವನೋ ಏನೋ...

"ನಿತ್ಯಾನಂದ ಸರ್ವೀಸಿನಲ್ಲಿ ಬಂದಿರಾ?"

"ಮೊದಲ್ನೇ ಬಸ್ನಲ್ಲೇ ಬಂದೆ."

"ಅದೇ ನಿತ್ಯಾನಂದ."

ನಿತ್ಯವೂ ಆನಂದ ಕೊಡುವ ಬಸ್ಸು! ಯಾರಿಗೊ?

...ನಂಜುಂಡಯ್ಯನ ಮನಸ್ಸಿನಲ್ಲಿದ್ದುದನ್ನು ಊಹಿಸಿಕೊಳ್ಳಲು ಸಮರ್ಥನಾದ ಜಯದೇವ ಹೇಳಿದ.

"ಧೂಳು ತಿಂದುಕೊಂಡೇ ಇಳಿದಿದ್ದೇನೆ. ಅಸಾಧ್ಯ ರಸ್ತೆಯಪ್ಪ!"

"ಗೊತ್ತು. ಬೆಂಗಳೂರು ನಗರದ ಜನಕ್ಕೆ ನಮ್ಮ ರಸ್ತೆಗಳು ಹಿಡಿಸೋದಿಲ್ಲ!"

ಆ ಮಾತನ್ನು ವಿಭಜಿಸಿ, ಅದರಲ್ಲಿದ್ದುದು ಇಂಥದೇ ಧ್ವನಿಯೆಂದು ಸುಲಭವಾಗಿ ಹೇಳಲಾಗದಂತಹ ಪರಿಸ್ಥಿತಿ. ಜಯದೇವ ನಕ್ಕು ಸುಮ್ಮನಿದ್ದ. ನಂಜುಂಡಯ್ಯನ ಮಾತಿನಿಂದ ಜಯದೇವನಿಗೆ ಎಲ್ಲಾದರೂ ನೋವಾಗಬಾರದೆಂದು ರಂಗರಾಯರು, ನಂಜುಂಡಯ್ಯ ಆಡಿದುದು ತಮಾಷೆಯ ನುಡಿ ಎಂಬಂತೆ ತಾವೂ ನಕ್ಕರು.

ಎರಡನೆಯ ಸಾರಿ ಗಂಟೆ ಬಾರಿಸಿತು. "ಸ್ವಾಮಿದೇವನೆ ಲೋಕಪಾಲನೆ" ಎಂದು ಎಲ್ಲ ಕಂಠಗಳಿಂದಲೂ ಸಾಮೂಹಿಕವಾಗಿ ಪ್ರಾರ್ಥನೆ ನಡೆಯಿತು. ಮೂವರು ಅಧ್ಯಾಪಕರು ತಮ್ಮ ಕೊಠಡಿಯಲ್ಲಿ ನಿಂತುಕೊಂಡೇ ಇದ್ದರು. ಹುಡುಗರ ಪ್ರಾರ್ಥನೆ ಮುಗಿಯುತ್ತ ಬಂದೊಡನೆ ನಂಜುಂಡಯ್ಯ ಜಯದೇವನಿಗೆ ಹೇಳಿದರು:

"ಕ್ಲಾಸಿದೆ, ಹೋಗ್ತೀನಿ. ನೀವು ಕೆಲಸ ಸೇರೋದು ನಾಳೇಂತ ತೋರುತ್ತೆ?"

"ಹೌದು ಸಾರ್."

"ಸರಿ ನೋಡೋಣ ಆ ಮೇಲೆ."

—ಅಷ್ಟು ಹೇಳಿ ನಂಜುಂಡಯ್ಯ ಗಂಭೀರ ನಡಿಗೆಯಿಂದ ತರಗತಿಗಳಿಗೆ ಹೋದರು.

ತಾನು ಶಾಲೆಯೊಳಗೆ ಮೊದಲ ಬಾರಿ ಕಾಲಿಟ್ಟಾಗ ಮುಖ್ಯೋಪಾಧ್ಯಾಯರ ಮುಖದ ಮೇಲೆ ಕಂಡಿದ್ದ ಪ್ರಸನ್ನತೆಯನ್ನು ಜಯದೇವ ಈಗ ಕಾಣಲಿಲ್ಲ. ಇಲ್ಲಿ ಎಲ್ಲವೂ ಸರಿಯಾಗಿಲ್ಲವೆಂಬುದೇನೋ ಆತನ ಸೂಕ್ಷ್ಮ ಬುದ್ಧಿಗೆ ಹೊಳೆದು ಹೋಯಿತು. ಅದರಿಂದ ಬೇಸರವಾಯಿತು. ತಾನು ಜತೆಯಲೆ

ದುಡಿಯಬೇಕಾದ ಆ ಇಬ್ಬರು ಉಪಾಧ್ಯಾಯರ ವಿಷಯವಾಗಿ ಹೆಚ್ಚು ತಿಳಿಯುವ ಕುತೂಹಲವೂ ಆಯಿತು. ಆದರೆ ಅಂಥದೆಲ್ಲ, ಕೇಳಿ ತಿಳಿದುಕೊಳ್ಳುವ ವಿಷಯಗಳಾಗಿರಲಿಲ್ಲ. ಸೂಕ್ಷ್ಮ ನಿರೀಕ್ಷಣೆಯೊಂದೇ ಅದಕ್ಕಿದ್ದ ಮಾರ್ಗ. ತಾನು ಮಾತಿನಲ್ಲಿ ಜಾಗರೂಕನಾಗಿರಬೇಕು; ಅಪ್ಪಿ ತಪ್ಪಿ ಆಡಬಾರದ್ದನ್ನು ಅನ್ನಬಾರದು—ಎಂದುಕೊಂಡ ಜಯದೇವ.

ಮುಖ್ಯೋಪಾಧ್ಯಾಯರು ಬೀರುವಿನಿಂದ ಒಂದೆರಡು ಪುಸ್ತಕಗಳನ್ನೂ ತಮ್ಮ ಮೇಜಿನೊಳಗಿಂದ ಚಾಕ್ ತುಂಡನ್ನೂ ಎತ್ತಿಕೊಂಡು ಅಂದರು:

"ಜಯದೇವ, ನೀವು ಬಂದಾಗ ಏನನ್ನೂ ಕೇಳಲೇ ಇಲ್ಲ. ಪ್ರಾತರ್ವಿಧಿ ಆಗಿದೆಯೇನು ?"

"ಆಯಿತು. ಎರಡುಸಾರೆ. ಈ ಊರಿನ ಹೋಟೆಲು ದರ್ಶನವೂ ಆಯಿತು."

"ಹಾಗಾದರೆ ಸರಿ. ಇವತ್ತೊಂದು ದಿವಸ ನಮ್ಮನೇಲೆ ಇದ್ಬಿಡಿ; ಸಾಯಂಕಾಲವೋ ನಾಳೆಯೋ ಬೇರೆ ಏರ್ಪಾಟು ಮಾಡೋಣ. ಸಧ್ಯಃ ಮೂರು-ನಾಲ್ಕನೆ ತರಗತಿ ಹುಡುಗರ ಹಾಜರಿ ತಕ್ಕೊಂಡು ಒಂದಿಷ್ಟು ಲೆಕ್ಕ ಕೊಟ್ಟು ಬರ್ತೀನಿ. ಆ ಮೇಲೆ ಮನೆಗೆ ಹೋಗೋಣ."

"ಆಗಲಿ ಸಾರ್."

ಒಬ್ಬನೇ ಉಳಿದ ಮೇಲೆ ಜಯದೇವ ಮತ್ತೊಮ್ಮೆ ಸೂಕ್ಷ್ಮವಾಗಿ ಆ ಕೊಠಡಿಯಲ್ಲಿದ್ದುದೆಲ್ಲವನ್ನೂ ಪರೀಕ್ಷಿಸಿದ. ಅದಿನ್ನು ತನ್ನ ಕೊಠಡಿಯೂ ಹೌದು...ಜಯದೇವ ಎದ್ದು ಅತ್ತಿತ್ತ ಶತಪಥ ತಿರುಗಿದ. ಮೇಜಿನ ಮೇಲಿದ್ದ ಪುಸ್ತಕಗಳನ್ನು-ಚೆಲ್ಲಾಪಿಲ್ಲಿಯಾಗಿಯೇ ಹರಡಿದ್ದ ಹಲವನ್ನು-ಒಂದರ ಮೇಲೊಂದಾಗಿ ಓರಣವಾಗಿ ಇರಿಸಿದ. ಆ ಕಪಾಟದ ಕೆಳಭಾಗ ಶಾಲೆಯ ಪುಸ್ತಕಭಂಡಾರವೂ ಆಗಿತ್ತು. ಅಲ್ಲಿ ನೂರನ್ನೂರು ಕನ್ನಡ ಪುಸ್ತಕಗಳಿದ್ದವು. ಅವು ಕೂಡಾ ನೋಡಿಕೊಳ್ಳುವವರಿಲ್ಲದೆ ಅನಾಥವಾಗಿದ್ದವು. 'ಬೇರೊಂದು ಪುಸ್ತಕ ಭಂಡಾರ ಒಳಗಿದೆಯೇನೋ' ಎನ್ನಿಸಿತು. ಆದರೆ ಆ ಬಡ ಶಾಲೆ-ಆತನಿಗೆ ತಿಳಿಯದೆ ? 'ಈ ಕೊಠಡಿಯೇ ಶಾಲೆಯ ಸಕಲ ಸಂಪತ್ತಾಗಿರಬೇಕು.' ಶಾಲೆಗೊಂದು ಒಳ್ಳೆಯ ಪುಸ್ತಕ ಭಂಡಾರವಿಲ್ಲವೆನ್ನುವುದು ಖೇದದ ವಿಷಯವೇ. ಆದಷ್ಟು ಬೇಗನೆ ಒಳ್ಳೆ ಪುಸ್ತಕಗಳ-ಹೊಸ ಪುಸ್ತಕಗಳ-ಸಂಖ್ಯೆ ಹೆಚ್ಚಿಸಬೇಕು. ಮುಖ್ಯೋಪಾಧ್ಯಾಯರಿಗೆ ಬಿಡುವಿಲ್ಲ

ವೇನೋ. ನಂಜುಂಡಯ್ಯನವರು—ಅವರಿಗೆ ಆಸಕ್ತಿಯೇ ಇಲ್ಲವೇನೋ. ಹಾಗಿದ್ದರೆ ತಾನಾದರೂ ಪುಸ್ತಕಭಂಡಾರವನ್ನು ನೋಡಿಕೊಳ್ಳುವ ಕೆಲಸ ಮಾಡಬೇಕು....

ಕಿಟಕಿಯ ಬಳಿ ನಿಂತು ಜಯದೇವ ಹೊರಕ್ಕೆ ನೋಡಿದ. ಸ್ವಲ್ಪದೂರ ದಲ್ಲೇ ಊರಿನ ಒಂದೇ ಬೀದಿ ಮಲಗಿತ್ತು. ಧೂಳು ಮುಚ್ಚಿತ್ತು ಅದರ ಮೈಯನ್ನು. ಜನಸಂಚಾರವೇ ಇರಲಿಲ್ಲ. ಅಕ್ಕಪಕ್ಕದಲ್ಲಿ ಕೆಲವು ಅಂಗಡಿ ಗಳಿದ್ದವು. ಬೀದಿಯಲ್ಲಿ ಒಂಟಿಎತ್ತಿನ ಗಾಡಿಯೊಂದು ನಿಧಾನವಾಗಿ ಚಲಿಸುತಿತ್ತು. ಬಿಸಲಿನ ಮೌನವನ್ನು ಮೆಲ್ಲನೆ ಸೀಳಿಕೊಂಡು ಆ ಗಾಡಿಯು 'ಗಡಕ್, ಗಜಲ್ ಗಡಕ್ ಗಜಲ್' ಸಪ್ಪಳ, ಜಯದೇವನ ಕಿವಿಗೂ ಬಂದು ತಟ್ಟುತಿತ್ತು.

ಈ ಶಾಲೆಗೆ ಸ್ವಂತ ಆಟದ ಬಯಲೇ ಇಲ್ಲವೇನೋ. ಸುತ್ತಮುತ್ತಲೂ ಬೇಕಷ್ಟು ಖಾಲಿ ಜಾಗವಿರುವ ಈ ಊರಿನಲ್ಲೂ ಆಟದ ಬಯಲು ಇಲ್ಲ ವೆಂದರೆ!... ಜಯದೇವನೇನೂ ಪಂದ್ಯಾಟದ ಪಟುವಾಗಿರಲಿಲ್ಲ. ಆಟದ ಉತ್ಸಾಹವನ್ನೆಲ್ಲ ಬಾಲ್ಯದ ಕಡು ಬಡತನ ಅಳಿಸಿ ಬಿಟ್ಟಿತ್ತು. ಆಟದ ಬಯ ಲಿನಲ್ಲಿ ಮನಸ್ಸನ್ನು ಉಲ್ಲಾಸವಾಗಿಡಲು ಆಸ್ಪದವಿಲ್ಲದೆ ಆತ, ಕತೆ ಕಾದಂ ಬರಿಗಳ ಪಾತ್ರಗಳೊಡನೆ ಬೆರೆತು ಅವರ ಸುಖದುಃಖಗಳಲ್ಲಿ ಪಾಲುಗಾರ ನಾಗುತಿದ್ದ. ಹೈಸ್ಕೂಲಿನಲ್ಲಿದ್ದಾಗಲೇ ಪಠ್ಯದ್ದಲ್ಲದ ಬೇರೆ ಪುಸ್ತಕಗಳನ್ನು ಓದುವ ಹುಚ್ಚು ಅವನಿಗೆ ಬಲವಾಗಿ ಅಂಟಿಕೊಂಡಿತ್ತು. ಒಮ್ಮೆ ಓದು ವುದರಲ್ಲೇ ತನ್ಮಯನಾದುದರಿಂದ ಅನ್ನ ಸೀದು ಹೋಗಿತ್ತು. ಮತ್ತೊಮ್ಮೆ, ಹುಳಿಗೆ ಎರಡು ಸಾರೆ ಉಪ್ಪು ಹಾಕಿದ್ದ. ಆಗ ಮನೆಯೊಡತಿಯೂ ಯಜ ಮಾನರೂ ಅವನನ್ನು ಹೀನಾಯವಾಗಿ ಬಯ್ದಿದ್ದರು. ಹತ್ತುಘಂಟೆಗೇ ಮನೆಯ ದೀಪಗಳನ್ನೆಲ್ಲ ಆರಿಸುತಿದ್ದುದರಿಂದ ರಾತ್ರಿ ಓದಲಾಗುತಿರಲಿಲ್ಲ...ಆ ಪರಿಸ್ಥಿತಿ ಬದಲಾದುದು ಜಯದೇವ ಕಾಲೇಜು ಸೇರಿದ ಮೇಲೆ ಮಾತ್ರ... ಪರೀಕ್ಷೆಯ ಸಮಯದಲ್ಲೆಲ್ಲ ವೇಣುಗೋಪಾಲನೊಡನೆ ಆತನ ಮನೆಯಲ್ಲೇ ಜತೆ-ಅಭ್ಯಾಸ. ಆಮೇಲೂ ವೇಣುಗೋಪಾಲ ಅಂದಿದ್ದ:

"ನಿನ್ನ ಸಾಹಿತ್ಯ ಪುಸ್ತಕ ಓದೋಕೆ ಈ ಮನೆ ಅನುಕೂಲವಾಗಿದೆ. ಇಲ್ಲಿಗೇ ಬಂದ್ಬಿಡಯ್ಯ."

ಸುನಂದಾ ಧ್ವನಿಗೂಡಿಸಿದ್ದಳು:

"ಹೂಂ ಜಯಣ್ಣ. ನೀವು ಇಲ್ಲಿಗ್ಬಂದ್ರೆ ನಮ್ಮಣ್ಣನೂ ಕಾದಂಬರಿ ಓದೋಕೆ ಕಲಿತ್ಕೋತಾನೆ."

ಸುನಂದಾ—ನಾಲ್ಕೈದು ವರ್ಷಗಳ ಹಿಂದೆ ತನಗೆ ಪರಿಚಯವಾದ ಪುಟ್ಟ ಹುಡುಗಿಯಲ್ಲ ಅವಳೀಗ....ವೇಣುವಿನಂತೆ ಆಕೆಯೂ ತನ್ನನ್ನು ಜಯಣ್ಣನೆಂದೇ ಕರೆಯುತಿದ್ದಳು. ಜಯಣ್ಣ ಎನ್ನುವ ಪದಕ್ಕೆ ವಿಶೇಷ ಅರ್ಥವೇನಾದರೂ ಇತ್ತೆ? ಚಂದ್ರಣ್ಣ, ಪುಟ್ಟಣ್ಣ, ರಾಜಣ್ಣರಿದ್ದ ಹಾಗೆ ತಾನೂ ಒಬ್ಬ ಅಣ್ಣ....ಆಕೆ ತನ್ನ ತಂಗಿಯಷ್ಟೇ ಯಾಕಾಗಬಾರದು? ಆದರೆ ಅದು ಹೇಗೆ ಸಾಧ್ಯ?....ಸುನಂದಾ...

ಅದರ ಬದಲು ಬೇರೇನನ್ನಾದರೂ ಯೋಚಿಸಲೆತ್ನಿಸಿದ ಜಯದೇವ. ಸಾಮಾನು ಹೇರಿಕೊಂಡು ಲಾರಿಯೊಂದು ಊರಮಾರ್ಗವಾಗಿ ಹಾದು ಹೋಯಿತು ಧೂಳೆಬ್ಬಿಸುತ್ತಾ....ಇಲ್ಲಿ ಪೌರಸಭೆ ಇದೆಯೋ ಇಲ್ಲವೋ. ಇರುವ ಒಂದೇ ಒಂದು ಮುಖ್ಯ ರಸ್ತೆಗೆ ಇಲ್ಲೇ ಅರ್ಧ ಫರ್ಲಾಂಗಿನಷ್ಟು ಉದ್ದಕ್ಕಾದರೂ ಡಾಮರು ಯಾಕೆ ಹಾಕಬಾರದು?....ಹುಡುಗಿಯರು... ವಿದ್ಯಾರ್ಥಿನಿಯರೂ ಇದ್ದಾರೆ ಈ ಶಾಲೆಯಲ್ಲಿ. ಸಹವಿದ್ಯಾಭ್ಯಾಸ ಇಂತಹ ಊರಲ್ಲಿರುವುದು ಒಂದು ರೀತಿಯ ಪ್ರಗತಿಯೇ ಸರಿ.

"ಮಿಸ್ಟರ್ ಜಯದೇವ್!"

ಸರಣಿಕಡಿದು ಯೋಚನೆಗಳು ಚೆಲ್ಲಾಪಿಲ್ಲಿಯಾದುವು. ಬೆಚ್ಚಿಬಿದ್ದು ಜಯದೇವ ತಿರುಗಿ ನೋಡಿದ. ರಂಗರಾಯರು ಮುಗುಳು ನಗುತ್ತಾ ಬಾಗಿಲಲ್ಲಿ ನಿಂತಿದ್ದರು.

"ಏನು ಕಿಟಿಕಿ ಹತ್ತಿರ ನಿಂತು ಊರು ನೋಡ್ತಾ ಇದೀರಲ್ಲ? ಹೇಳಿ, ನಮ್ಮೂರು ಚೆಂದವೋ ನಿಮ್ಮೂರು ಚೆಂದವೋ?"

ಅದು 'ಮೈಸೂರು ಮಲ್ಲಿಗೆ'ಯ ಒಂದು ಸಾಲು. ಮುಖ್ಯೋಪಾಧ್ಯಾಯರ ಸಾಹಿತ್ಯಜ್ಞಾನವನ್ನೂ ರಸಿಕತೆಯನ್ನೂ ಕಂಡು ಜಯದೇವನಿಗೆ ಸಂತೋಷವಾಯಿತು.

"ಯಾವುದು ಚೆಂದ ಅನ್ನೋದು ನೋಡುವ ದೃಷ್ಟಿ ಮೇಲಿದೆ ಸಾರ್."

"ಅದು ನಿಜ....ಈಗ ಬನ್ನಿ, ಮನೆಗೆ ಹೋಗೋಣ."

ರಂಗರಾಯರ ಹಿಂದೆಯೆ ಇಬ್ಬರು ಹುಡುಗರಿದ್ದು, ಜಯದೇವನ ಸಾಮಾನುಗಳನ್ನು ಅವರು ಎತ್ತಿಕೊಂಡರು.

... ......

ಕೂಗಳತೆಯ ದೂರದಲ್ಲಿ ಇತ್ತು ಮುಖ್ಯೋಪಾಧ್ಯಾಯರ ಮನೆ. ಹೊರಗೆ ಹಿತ್ತಿಲು. ಗಾಳಿ ಬೆಳಕು ಓಡಾಡುವ ಕಿಟಕಿಗಳು. ಮೇಲೆ ಹೆಂಚು ಹೊದಿಸಿತ್ತು. ಮನೆಯ ಮುಂದೆ ರಂಗೋಲಿ ಬಿಡಿಸಿದ್ದರು. ನೀರವವಾಗಿ ಶಾಂತವಾಗಿ ಮನಸಿಗೆ ನೆಮ್ಮದಿಯನ್ನುಂಟುಮಾಡುವ ಹಾಗಿತ್ತು ವಾತಾವರಣ.

"ಸಾವಿತ್ರೀ!"

ರಂಗರಾಯರು ಕರೆದರು. ಬಂದು ಬಾಗಿಲು ತೆರೆದಾಕೆ ಮಧ್ಯಮ ವಯಸ್ಸಿನ ಸ್ತ್ರೀ. ತಲೆಗೂದಲು ಅರ್ಧಕ್ಕರ್ಧ ಬಿಳಿಯಾಗಿತ್ತು. ನೋಡಿದವ ರಿಂದೆಲ್ಲಾ ಗೌರವವನ್ನು ಅಪೇಕ್ಷಿಸುವ ಭಾವವಿತ್ತು, ವಯೋಭಾರದಿಂದ ತುಂಬಿಕೊಂಡಿದ್ದ ಆ ಮುಖದ ಮೇಲೆ.

"ನಮ್ಮ ಹೊಸ ಮೇಷ್ಟ್ರು ಬಂದಿದಾರೆ ಸಾವಿತ್ರಿ. ಕರಕೊಂಡ್ಬಂದಿದೇನೆ."

ಆಕೆ ಮನೆಯ ಯಜಮಾನಿತಿ ಎನ್ನುವುದು ಜಯದೇವನಿಗೆ ಖಚಿತ ವಾಯಿತು. ಯಜಮಾನಿತಿ ಸ್ವಲ್ಪ ಸಂಕೋಚದ ದೃಷ್ಟಿಯಿಂದಲೇ ತಮ್ಮ ಗಂಡನ ಭುಜದ ಮೇಲಿಂದ ಇಣಿಕಿ ನೋಡಿದರು. ವಿದ್ಯಾರ್ಥಿಯ ಹಾಗೆಯೇ ಇದ್ದ ಆ ಯುವಕ....ಅವರ ಮೊದಲನೆಯ ಹುಡುಗ ಗೋಪಣ್ಣನಿಗಿಂತಲೂ ಚಿಕ್ಕವನು....ಆಕೆ ಮುಗುಳ್ನಕ್ಕಳು.

ಮನೆಯ ಒಳಗೂ ಅಷ್ಟೇ. ಗೋಡೆಗೆ ಸುಣ್ಣ ಬಳಿದಿತ್ತು. ಹಜಾರ ದಲ್ಲಿದ್ದುದೊಂದೇ ದೇವರ ಪಠ—ಸರಸ್ವತಿಯದು. ಆದರೆ ಸುತ್ತಲೂ ಕಟ್ಟು ಹಾಕಿದ್ದ ಭಾವಚಿತ್ರಗಳಿದ್ದವು—ಕೆಲವು ಹೊಸತು, ಕೆಲವು ಮಾಸಿದುವು. ಗಾಂಧೀಜಿಯ ಬಣ್ಣದ ಚಿತ್ರವಿತ್ತು. ಕಾಳಿಂಗನನ್ನು ಮರ್ದಿಸುತ್ತಿದ್ದ ಕೃಷ್ಣನ ಚಿತ್ರ ಹೊತ್ತ ತಾರೀಖುಪಟ್ಟಿಯೊಂದಿತ್ತು.

ಹುಡುಗರು, ಜಯದೇವನ ಹಾಸಿಗೆಯನ್ನೂ ಚೀಲವನ್ನೂ ಕೆಳಕ್ಕಿರಿಸಿ ಶಾಲೆಗೆ ವಾಪಸು ಹೋದರು.

ಹಜಾರದಲ್ಲಿದ್ದ ಕುರ್ಚಿಯತ್ತ ಬೊಟ್ಟುಮಾಡಿ ರಂಗರಾಯರೆಂದರು:

"ಕೂತಿರಿ ಜಯದೇವ್, ಈಗ ಬಂದೆ."

"ಆಗಲಿ ಸಾರ್, ಏನೂ ಪರವಾಗಿಲ್ಲ."

ರಾಯರು ಸ್ನಾನದ ಮನೆಯ ವ್ಯವಸ್ಥೆ ಮಾಡಿಬರಲೆಂದು ಒಳ ಹೋದರು. ಜಯದೇವ ಸೊಂಟದ ಮೇಲೆ ಕೈ ಇಟ್ಟು ಗೋಡೆಗೆ ತೂಗ ಹಾಕಿದ್ದ ಭಾವಚಿತ್ರಗಳನ್ನು ನೋಡುತ್ತ ನಿಂತ. ಉಪಾಧ್ಯಾಯರ ಶಿಕ್ಷಣ ಕೇಂದ್ರ...ಯಾವುದೋ ಶಾಲೆಯ ವಾರ್ಷಿಕೋತ್ಸವ...ಇನ್ನೊಂದು ವಿದಾಯ ಸತ್ಕಾರಕೂಟ....ರಂಗರಾಯರು ಹೆಂಡತಿಯೊಡನೆ ಕುಳಿತಿದ್ದ ಕುಟುಂಬ ಚಿತ್ರವೊಂದು...ಅದರಲ್ಲಿ ತನ್ನ ಸಮವಯಸ್ಕರಂತಿದ್ದ ಇಬ್ಬರು ಹುಡುಗರೂ ಒಬ್ಬ ಹುಡುಗಿಯೂ ನಿಂತಿದ್ದರು...

ಹಿಂತಿರುಗಿ ಬಂದ ರಂಗರಾಯರು, ಜಯದೇವ ಭಾವಚಿತ್ರಗಳನ್ನು ನೋಡುತ್ತಲಿದ್ದುದನ್ನು ಕಂಡು ನಕ್ಕರು.

"ಆಗಲೇ ನಮ್ಮ ಸಂಸಾರದ ಪರಿಚಯ ಮಾಡ್ಕೋತಾ ಇದೀರಿ ಅಲ್ವೆ?"

ಅವರೂ ಜಯದೇವನ ಸಮೀಪಕ್ಕೆ ಬಂದರು.

"ನೋಡಿ ಈ ಚಿತ್ರ. ಇವನು ನಮ್ಮ ದೊಡ್ಡ ಹುಡುಗ ಗೋಪಾಲ ಕೃಷ್ಣ, ಬಿ. ಎಸ್. ಸಿ. ಮಾಡಿದಾನೆ. ಭದ್ರಾವತಿ ಕಾರ್ಖಾನೇಲಿ ಕೆಲಸ ಸಿಕ್ಕಿದೆ. ಇವನು ರಾಮಣ್ಣ, ಎಸ್. ಎಸ್.ಎಲ್. ಸಿ. ಆದ್ಮೇಲೆ ಮೆಡಿಕಲ್ ಸ್ಕೂಲಿಗೆ ಹಾಕಿದೀನಿ. ಬೆಂಗಳೂರಲ್ಲಿ ಓದ್ತಿದಾನೆ. ಇವಳು ನಮ್ಮ ಹುಡುಗಿ ಸರೋಜಾ, ಹೋದ ವರ್ಷ ಮದುವೆಯಾಯ್ತು. ಹುಡುಗ ಬಿ. ಇ. ಮಾಡ್ಕೊಂಡಿದಾನೆ. ಬೆಂಗಳೂರಲ್ಲಿ ಚೀಫ್ ಇಂಜಿನಿಯರ ಆಫೀಸ್ನಲ್ಲಿ ಕೆಲಸ. ಸರೋಜಾನೂ ಅಲ್ಲೇ ಇದಾಳೆ ಮಾವನ್ಮನೇಲಿ."

ತಾನೂ ಏನಾದರೂ ಅನ್ನಬೇಕೆಂದು ಜಯದೇವನೆಂದ:

"ನಿಮ್ಮ ಎರಡ್ನೇ ಮಗನೂ ಅಳಿಯನ ಮನೇಲಿ ಇದಾರೇನೊ ?"

"ಇಲ್ಲವಪ್ಪ. ಅದೆಲ್ಲಾ ಓದೋಕೆ ಅನುಕೂಲವಾಗಿರೊಲ್ಲ ಅಂತ ಹಾಸ್ಟೆಲ್ನಲ್ಲೇ ಇರಿಸಿದೀನಿ."

"ಅದೂ ನಿಜವೆನ್ನಿ. ಮೆಡಿಕಲ್ ಸ್ಕೂಲ್ನಲ್ಲಿ ಓದೋದು ಜಾಸ್ತಿ ಇರತ್ತೆ."

"ಎಂ. ಬಿ. ಬಿ. ಎಸ್. ಓದಿಸ್ಬೇಕೂಂತಾನೇ ಇದ್ದೆ. ಆದರೆ ಆದಕ್ಕೆ ಇನ್ನೆರಡು ವರ್ಷ ಕಾಲೇಜ್ನಲ್ಲಿ ಓದ್ಬೇಕು. ಆ ಮೇಲೂ ಕೂಡಾ ಸೀಟು ಸಿಗುತ್ತೆ ಅನ್ನೋ ಭರವಸೆ ಏನು ?"

"ಸರಿಯೆ. ಆದರೆ ಎಲ್ಲರೂ ಬೇರೆ ಬೇರೆ ಲೈನೇ ಹಿಡಿದಿದಾರಲ್ಲಾ ? ಉಪಾಧ್ಯಾಯವೃತ್ತಿ ಯಾರಿಗೂ ಇಷ್ಟವಾಗ್ಲಿಲ್ವೇನೊ ?"

ರಂಗರಾಯರು ನಕ್ಕರು. ಸ್ವಲ್ಪ ಹೊತ್ತು ಉತ್ತರವನ್ನೇ ಕೊಡಲಿಲ್ಲ. ಆ ಮೇಲೆ ನಿಧಾನವಾಗಿ ಅಂದರು:

"ನಿಮ್ಮ ಹತ್ತಿರ ಆ ವಿಷಯ ಹೇಳದೆ ಇರೋದೇ ಮೇಲು ಅನ್ನಿಸುತ್ತೆ. ಆದರೆ ಹಾಗೆ ಮಾಡೋದೂ ತಪ್ಪಾಗುತ್ತೇನೋ! ಜಯದೇವ, ನನ್ನ ಮಕ್ಕಳು ಯಾರೂ ಉಪಾಧ್ಯಾಯರಾಗಿ ಸಂಕಟ ಅನುಭವಿಸ್ಬಾರ್ದು ಅನ್ನೋದು ನನ್ನ ಅಪೇಕ್ಷೆ."

ಉಗುಳು ಗಂಟಲಲ್ಲಿ ತೊಡಕಾಗಿ ನಿಂತ ಜಯದೇವನ ಮುಖಬಾಡಿತು.

"ಯಾಕೆ ಹಾಗಂತೀರಾ?"

"ಇವತ್ತು ಬೇಡಿ ಆ ಮಾತು. ಮುಂದೆ ಯಾವತ್ತಾದರೂ ಹೇಳ್ತೀನಿ."

ರಂಗರಾಯರ ನೋವನ್ನು ತನ್ನದಾಗಿಮಾಡಿ ಆ ಕಹಿ ಉಗುಳನ್ನು ಜಯದೇವ ನುಂಗಿದ.

ಎಲ್ಲ ಭಾವಚಿತ್ರಗಳಿಗಿಂತಲೂ ಎತ್ತರದಲ್ಲಿದ್ದ ಮಸಕಾಗಿದ್ದ ಇನ್ನೊಂದು ಚಿತ್ರವನ್ನು ರಂಗರಾಯರು ತೋರಿಸಿದರು.

"ಅದನ್ನು ನೋಡಿದಿರಾ ?"

ಜಯದೇವನಿಗೆ ಸ್ಪಷ್ಟವಾಗಿ ಏನೂ ಕಾಣಿಸುತ್ತಿರಲಿಲ್ಲ.

ರಂಗರಾಯರು ಆ ಭಾವಚಿತ್ರವನ್ನು ಮೊಳೆಯಿಂದ ಕೆಳಕ್ಕೆ ತೆಗೆದರು.

"ಗಾಂಧೀಜಿ!"

"ಹೌದು,ಅವರು ನಂದಿಬೆಟ್ಟಕ್ಕೆ ಬಂದಿದ್ದಾಗ ತೆಗೆದದ್ದು... ಸರಿಯಾಗಿ ನೋಡಿ, ನಿಮ್ಮ ಗುರಿತಿನವರು ಯಾರಾದರೂ ಇದಾರೇನೋ?"

ಜಯದೇವ ಆ ಗುಂಪಿನಲ್ಲಿ ರಂಗರಾಯರನ್ನು ಹುಡುಕಿದ. ಎಲ್ಲೂ ಕಾಣಿಸಲಿಲ್ಲ.

ರಂಗರಾಯರು ಗುಂಪಿನಲ್ಲಿದ್ದ ಒಂದು ವ್ಯಕ್ತಿಯತ್ತ ಬೊಟ್ಟುಮಾಡಿದರು.

"ಇವರು ಯಾರಹಾಗಿದಾರೆ ಹೇಳಿ."

ಅಡ್ಡಪಂಚೆ, ಷರಟು, ತಲೆಯ ಮೇಲೆ ಗಾಂಧಿ ಟೋಪಿ. ಹುಡುಗನ

ಮುಖ, ಜಯದೇವನಿಗೆ ಗುರುತು ಸಿಕ್ಕಿತು; ಆತ ರಂಗರಾಯರತ್ತ ನೋಡಿ ನಕ್ಕ.

ಅಷ್ಟರಲ್ಲಿ ಅವರ ಹೆಂಡತಿ ಕಂಚಿನ ಎರಡು ಲೋಟಗಳಲ್ಲಿ ನಿಂಬೆಹಣ್ಣಿನ ಪಾನಕ ತಂದಿಟ್ಟರು....

...ಜಯದೇವ ಸ್ನಾನವುಗಿಸಿ ಬಂದ.

ಹಜಾರದಲ್ಲೇ ಮುಖ್ಯೋಪಾಧ್ಯಾಯರೂ, ಜಯದೇವನೂ ಊಟಕ್ಕೆ ಕುಳಿತರು.

ಬಡಿಸುತ್ತ ಸಾವಿತ್ರಮ್ಮ ಗಂಡನನ್ನು ಉದ್ದೇಶಿಸಿ ಕೇಳಿದರು :

"ಮದುವೆ ಆಗಿದೆಯೋ !"

"ಮದುವೆಯಾಗಿ ಮೂರು ಮಕ್ಕಳ ತಾಯಿಯಾದ್ಮೇಲೂ ನನ್ನ ಹೀಗೆ ಕೇಳ್ತೀಯಲ್ಲೆ !"

"ಹೋಗಿ ನಿಮ್ಮನ್ನಲ್ಲ ಕೇಳಿದ್ದು."

ಗಂಡ ಹೆಂಡಿರ ಹುಸಿಮುನಿಸಿನ ಆ ಸಂವಾದ ಸ್ವಾರಸ್ಯಕರವಾಗಿ ಜಯದೇವನಿಗೆ ತೋರಿತು. ಆತ ನಗುತ್ತ ಹೇಳಿದ:

"ಇನ್ನೂ ಇಲ್ಲವಮ್ಮ."

ಆ ತಾಯಿ ಕೇಳಿದರು:

"ಬೆಂಗಳೂರೇನ ಊರು ?"

"ಹೂಂ. ಹಾಗೆಂತ಼್ಲೇ ಅನ್ನಬೇಕು."

"ಹಾಗಾದರೆ ನಮ್ಮ ರಾಮಣ್ಣನೂ ಸರೋಜಾ ಗಂಡನೂ ನಿಮಗೆ ಗೊತ್ತೋ ಏನೋ ?"

ರಂಗರಾಯರು ನಕ್ಕರು.

"ನೀನೂ ಸರಿ. ಬೆಂಗಳೂರು ನೋಡದವರ ಹಾಗೆ ಮಾತಾಡ್ತೀಯಲ್ಲೇ! ನಿನ್ನ ಮಗ, ಮಗಳು, ಅಳಿಯ ಎಲ್ಲಿದ್ರೂ ಎಲ್ಲರಿಗೂ ಗೊತ್ತಾಗೋ ಮಹಾಪುರುಷರೂಂತ ತಿಳಕೊಂಡ್ಯಾ?"

ಸಾವಿತ್ರಮ್ಮನ ಮುಖ ಪೆಚ್ಚಾಯಿತು. ತಾಯಿಯಿಲ್ಲದ ಜಯದೇವ, ಸಾವಿತ್ರಮ್ಮನ ಪಕ್ಷವನ್ನೇ ವಹಿಸಿದ.

"ಗೊತ್ತಾಗದೆ ಏನು ? ನಾನೇ ಪರಿಚಯ ಮಾಡಿಕೊಂಡಿಲ್ಲ, ಅಷ್ಟೆ. ಇನ್ನೊಂದ್ಸಲ ಹೋದಾಗ ವಿಳಾಸ ತಗೊಂಡು ಹೋಗ್ತೀನಿ"

ಆ ಮಾತು ಕೇಳಿ ಸಾವಿತ್ರಮ್ಮನಿಗೆ ಬಲು ಸಂತೋಷವಾಯಿತು. ಅವರು ಮೈಮರೆತವರ ಹಾಗೆ ಹುಳಿಯನ್ನು ಎರಡುಮೂರು ಸೌಟು ಹೆಚ್ಚಾಗಿಯೇ ಜಯದೇವನಿಗೆ ಬಡಿಸಿದರು.

"ಪಾಪ! ಬರೇ ಹುಳಿ ತಿನ್ನಿಸ್ತೀಯಲ್ಲೇ ಅವರಿಗೆ," ಎಂದು ನಗೆಯಾಡಿದರು ರಂಗರಾಯರು. ಜಯದೇವನನ್ನು ಮಾತ್ರ 'ನೀನು ತಿಳಿವಳಿಕೆಯುಳ್ಳವನು ಕಣಪ್ಪ'ಎಂದು ಮೆಚ್ಚುಗೆಯ ದೃಷ್ಟಿಯಿಂದ ನೋಡಿದರು.

ಊಟವಾದೊಡನೆಯೇ ಮತ್ತೆ ಶಾಲೆಗೆ ಹೊರಟರು ಮುಖ್ಯೋಪಾಧ್ಯಾಯರು, ಹೊರಡುತ್ತ ಅವರೆಂದರು:

"ನೀವು ಸ್ವಲ್ಪ ವಿಶ್ರಾಂತಿ ತಗೊಳ್ಳಿ ಜಯದೇವ. ಮಲಕ್ಕೊಂಡ್ಬಿಡಿ ಐದು ಘಂಟೆಗೆ ಸರಿಯಾಗಿ ಶಾಲೆಗ್ಬನ್ನಿ. ಒಳಗೆ ಹೇಳಿರ್‍ತೀನಿ. ಎಬ್ಬಿಸ್ತಾರೆ. ಚಾಪೆ ತಂದ್ಕೊಡ್ಲಾ?"

ಶುಭ್ರವಾದ ಜಟ್ಟಿಬರೆಗಾಗಿ ಬಿಚ್ಚಿದ್ದ ಹಾಸಿಗೆ ಹಾಗೆಯೇ ಮುದುಡಿಕೊಂಡಿತ್ತು. ಅದನ್ನು ನೋಡುತ್ತ ಜಯದೇವನೆಂದ:

"ಬೇಡಿ. ಇದನ್ನೇ ಬಿಡಿಸ್ಕೋತೀನಿ."

"ಸರಿ ಹಾಗಾದರೆ."

... ಸಾವಿತ್ರಮ್ಮ ಮನೆಗೆಲಸದಲ್ಲೇ ನಿರತರಾದರು. ಜಯದೇವ ಹೊರಗೆ ಹಜಾರದಲ್ಲಿ ಹಾಸಿಗೆಯ ಮೇಲೊರಗಿಕೊಂಡ. ಬಿಸಿಲಿನ ಕಬ್ಬಿಣದ ಕೋಟೆಯನ್ನೂ ಭೇದಿಸಿ ತಂಗಾಳಿ ನುಸುಳಿ ಬಂತು. ಯೌವನದ ಕೆಚ್ಚಿನಿಂದ ಯಾವ ಆಯಾಸಕ್ಕೂ ಮಣಿಯದೆ ಇದ್ದ ಮೈ, ಮಂಪರಿನ ಮಬ್ಬಿನಲ್ಲಿ ಸಡಿಲುಗೊಂಡೊಡನೆ ನಿದ್ದೆಗೆ ಶರಣು ಹೋಯಿತು.

# ೨

ಎಚ್ಚರಗೊಂಡು ಜಯದೇವ ಎದ್ದು ಕುಳಿತ. ಬಿಸಿಲಿನ ಶಾಖಕ್ಕೆ ಮೈಯೆಲ್ಲ ಬೆವತುಹೋಗಿತ್ತು. ಕಣ್ಣುಗಳು ಉರಿಯುತಿದ್ದುವು. ಎಷ್ಟು ಹೊತ್ತಾಯಿತೋ ಏನೋ—ಎಂದುಕೊಂಡ ಜಯದೇವ.

ಹಾಗೆ ಮೂರು ನಾಲ್ಕು ನಿಮಿಷ ಕಳೆದಿದ್ದುವೋ ಇಲ್ಲವೋ ಮನೆಯೊಡತಿ ಒಳಬಾಗಿಲಿನಿಂದ ಹಜಾರಕ್ಕೆ ಇಣಿಕಿನೋಡಿ ಅಂದರು:

"ಎದ್ದಿರಾ ? ಘಂಟೆ ನಾಲ್ಕೂವರೆ ಆಗ್ತಾ ಬಂತು."

"ಅಷ್ಟಾಯ್ತೆ ? ಚನ್ನಾಗಿ ನಿದ್ದೆ ಬಂದ್ಬಿಡ್ತು ನಂಗೆ."

ಆ ತಾಯಿಗೆ ಅದು ತಿಳಿಯದೆ ? ತಮ್ಮ ಮಕ್ಕಳೇ ದೂರ ಪ್ರವಾಸದಿಂದ ಬಂದಾಗ ಈ ಲೋಕವನ್ನು ಮರೆತು ನಿದ್ದೆಹೋಗುವುದನ್ನು ಅವರು ಕಂಡಿರಲಿಲ್ಲವೆ ?

ಮುಖಕ್ಕೆ ಒಂದಿಷ್ಟು ನೀರು ಹನಿಸಿಕೊಳ್ಳಲು ಬಯಸಿದ ಜಯದೇವ. ಆತನ ಮನಸ್ಸಿನಲ್ಲಿದ್ದುದನ್ನು ಸುಲಭವಾಗಿ ಊಹಿಸಿಕೊಂಡು ಸಾವಿತ್ರಮ್ಮ ಅಂದರು:

"ಏಳಿ, ಬಚ್ಚಲು ಮನೆಗೆ ಹೋಗಿ ಮುಖ ತೊಳಕೊಂಡು ಬನ್ನಿ. ಕಾಫಿ ಇಳಿಸಿದೀನಿ."

ಆ ಉಪಚಾರದ ಮಾತು ಕೇಳಿ ಜಯದೇವನಿಗೆ ಸಂಕೋಚವೆನಿಸಿತು. ಆದರೆ ಆ ತಾಯಿಯ ದೃಷ್ಟಿಯಿಂದ ಏನನ್ನು ಮರೆಮಾಚುವುದೂ ಸಾಧ್ಯವಿರಲಿಲ್ಲ ಆತನಿಗೆ—

"ಸಂಕೋಚಪಟ್ಕೋಬೇಡಿ. ಏಳಿ !"

ಜಯದೇವನೆದ್ದು ಮುಖ ತೊಳೆದುಕೊಂಡು ಬಂದ. ಟವಲಿನಿಂದ ನೀರೊರೆಸಿ, ಎರಡಾಣೆ ಕೊಟ್ಟು ಕೊಂಡಿದ್ದ ಪ್ಲಾಸ್ಟಿಕ್ ಬಾಚಣಿಗೆಯನ್ನು ಬೆಳಗ್ಗೆ ತೊಟ್ಟುಕೊಂಡಿದ್ದ ಮಲಿನವಾದ ಜುಬ್ಬದ ಜೇಬಿನಿಂದ ಹೊರತೆಗೆದ. ಅವನ ಕಣ್ಣಿಗೆ ಎಲ್ಲೂ ಕನ್ನಡಿ ಬೀಳಲಿಲ್ಲ. ಅದರ ಆವಶ್ಯಕತೆಯೂ ಇರಲಿಲ್ಲ ಅವನಿಗೆ. ಬಾಚಣಿಗೆ ನೀಳವಾದ ತಲೆಗೂದಲನ್ನು ನುಣುಪಾಗಿ ಬಾಚಿ ಹಿಂದಕ್ಕೆ ತಳ್ಳಿತು. ಅಷ್ಟರಲ್ಲೆ ಸಾವಿತ್ರಮ್ಮ ಕನ್ನಡಿ ತಂದು ಹೊರಕ್ಕಿಟ್ಟರು.

"ಬೇಡೀವ್ಮಾ."

ಆ ತಾಯಿಗೆ ಆಶ್ಚರ್ಯವಾಗದಿರಲಿಲ್ಲ...ಬೆಂಗಳೂರಿನ ಈತ ಷೋಕಿ ಹುಡುಗನಲ್ಲ. ಕನ್ನಡಿ ಇಲ್ಲದೆಯೇ ಕ್ರಾಪು ಬಾಚಿಕೊಳ್ಳುವ ಈ ಸರಳತೆ ಎಷ್ಟೊಂದು ಒಳ್ಳೆಯ ಗುಣ !...ಅವರು ಒಂದು ಲೋಟದ ತುಂಬ ಕಾಫಿ ತಂದು ಕೊಟ್ಟರು.

ಆ ಕಾಫಿ ರುಚಿಕರವಾಗಿತ್ತು. ಆ ತಾಯಿಗೆ ಅದು ತಿಳಿದಿದ್ದರೂ ಅತಿಥಿಯ ಬಾಯಿಂದ ಪ್ರಶಂಸೆ ಅವರಿಗೆ ಬೇಕಿತ್ತು.

"ನಮ್ಮಮನೆ ಕಾಫಿ ಚೆನ್ನಾಗಿದೆಯೋ ಇಲ್ಲವೋ ?"

"ಹೋಟಲುಗಳ ಕೆಟ್ಟ ಕಾಫಿ ಕುಡಿದು ರುಚಿ ಕೆಡಿಸಿಕೊಂಡ ನಾಲಿಗೆಗೂ ಚೆನ್ನಾಗಿ ಕಾಣ್ತಾದೆ ಅಂದಮೇಲೆ–"

ಅದು ನಿರೀಕ್ಷಿಸಿದ್ದುದಕ್ಕಿಂತಲೂ ಹೆಚ್ಚಿನ ಪ್ರಶಂಸೆಯಾಗಿತ್ತು.

"ನೀವು ಹೋಟೆಲಿಗೆ ಹೋಗಲೇಬೇಡಿ. ಮನೆಮಾಡೋತನಕ ನಮ್ಮಲ್ಲೇ ಇದ್ಬಿಡಿ."

ಆ ಆಹ್ವಾನ ಜಯದೇವನನ್ನು ಚಕಿತಗೊಳಿಸಿತು. ಆತ ಏನನ್ನೂ ಹೇಳಲಿಲ್ಲ. ತಾನು ಮನೆ ಮಾಡುವುದರ ಪ್ರಸ್ತಾಪದಿಂದ ನಗು ಬಂತು... ಆತ ಮೌನವಾಗಿ ಲೋಟವನ್ನು ಬರಿದುಗೊಳಿಸಿದ.

ಮತ್ತೆ ತಡಮಾಡದೆ ಜಯದೇವ ಬೀದಿಗಿಳಿಯುತ್ತಿದ್ದಂತೆ ಆ ತಾಯಿ ಅಂದರು:

"ಹಾದಿ ಗೊತ್ತಾಗುತ್ತೆ ತಾನೆ ?"

"ಓಹೋ !"

ಬೆಂಗಳೂರಿನಲ್ಲಾದರೆ ಬಂದ ಹೊಸಬರಿಗೆ ಆ ಪ್ರಶ್ನೆ ಕೇಳಬಹುದು. ಆದರೆ ಆ ಪುಟ್ಟ ಊರಲ್ಲಿ ಯಾರಿಂಗಾದರೂ ಹಾದಿ ತಪ್ಪುವುದೆಂದರೇನು ?

ಸರಸರನೆ ನಡೆದು ಜಯದೇವ ಶಾಲೆ ಸೇರಿದಾಗ ಆಗಿನ್ನೂ ಐದು ಹೊಡೆದಿರಲಿಲ್ಲ. ದಿನದ ಪಾಠ ಮುಗಿದು ವಿದ್ಯಾರ್ಥಿಗಳೆಲ್ಲ ಹೊರಟುಹೋಗಿ ಶಾಲೆ ಬರಿದಾಗಿತ್ತು. ರಂಗರಾಯರು ಆ ಬೆಳಗ್ಗೆ ಬಂದಿದ್ದ ದಿನಪತ್ರಿಕೆಯನ್ನೋದುತ್ತಲೂ ನಂಜುಂಡಯ್ಯ ಸಿಗರೇಟು ಸೇದುತ್ತಲೂ ಕುಳಿತಿದ್ದರು. ಜಯದೇವನನ್ನು ಮೊದಲು ನೋಡಿದ ನಂಜುಂಡಯ್ಯ "ಹಲೋ" ಎಂದರು. ಜಯದೇವ ನಸುನಕ್ಕು ವಂದನೆ ಸ್ವೀಕರಿಸಿ ಅಲ್ಲೇ ಕುರ್ಚಿಯ ಮೇಲೆ ಕುಳಿತ.

ಹಳೆಯ ಸ್ನೇಹಿತನಂತೆ ನಂಜುಂಡಯ್ಯ ಕೇಳಿದರು:

"ಚೆನ್ನಾಗಿ ನಿದ್ದೆ ಮಾಡಿದಿರಾ ?"

ಔಪಚಾರಿಕವಾದ ಆ ಪ್ರಶ್ನೆಗೆ ಉತ್ತರ ಅನಗತ್ಯವೆಂದು ಜಯದೇವ ಮುಗುಳ್ನಕ್ಕು ಸುಮ್ಮನಾದ.

ನಂಜುಂಡಯ್ಯ ಬಂಗಾರದ ಗಿಲೀಟು ಹಾಕಿದ್ದ ಕೇಸನ್ನು ಹೊರ ತೆಗೆದು ಕೇಳಿದರು.

"ಸಿಗರೇಟು ?"

"ಇಲ್ಲ ಕ್ಷಮಿಸಿ. ನಾನು ಸೇದೋದಿಲ್ಲ."

"ಆಶ್ಚರ್ಯ ! ಈ ತನಕ ಸಿಗರೇಟು ಮುಟ್ಟಿಯೇ ಇಲ್ವೆ ?"

"ಹಾಗೇನೂ ಇಲ್ಲ. ಆದರೆ ಅಭ್ಯಾಸ ಮಾಡ್ಕೊಂಡಿಲ್ಲ. ಬೇಡಿ."

ಈ ಮಾತುಕತೆ ತಮಗೆ ಸಂಬಂಧಿಸಿದ್ದೇ ಅಲ್ಲವೆಂಬಂತೆ ಕುಳಿತಿದ್ದ ರಂಗರಾಯರು ಕೊನೆಗೊಮ್ಮೆ ಪತ್ರಿಕೆ ಮಡಚಿ, ಕನ್ನಡಕವನ್ನು ತೆಗೆದು ರಕ್ಷೆಯೊಳಗಿರಿಸಿದರು. ಕರವಸ್ತ್ರದ ಅಂಚಿನಿಂದ ಕಣ್ಣುಗಳನ್ನೂ ತಲೆಯನ್ನೂ ಒರೆಸಿದರು. ಕಿಟಕಿಯಿಂದ ಹೊರನೋಡುತ್ತಾ ಅವರೆಂದರು:

"ಅಬ್ಬಾ ಎಂಥ ಸೆಖೆ ! ಮಳೆ ಬರೋ ಹಾಗಿದೆ ಇವತ್ತು."

ಹವಾಮಾನವನ್ನು ಕುರಿತಾದ ಮಾತು ಮುಂದುವರಿಸುವ ಉತ್ಸುಕತೆಯೇನನ್ನೂ ನಂಜುಂಡಯ್ಯ ತೋರಿಸಲಿಲ್ಲ. ಜಯದೇವನೂ ಸುಮ್ಮನಿದ್ದ.

ಅವರಿಬ್ಬರನ್ನೂ ನೋಡುತ್ತ, ತಲೆಗೆ ಟೋಪಿಯನ್ನೇರಿಸಿ ರಂಗರಾಯರೆಂದರು:

"ಹೋಗೋಣ್ವೆ ?"

ಸಿಗರೇಟನ್ನು ಬೂಟಿನ ಕೆಳಭಾಗಕ್ಕೆ ಮುರಟಿಸಿ ಹೊರಕ್ಕೆಸೆದು ಕೊನೆಯ ಹೊಗೆಯುಗುಳಿನೊಡನೆ ನಂಜುಂಡಯ್ಯ ಹೇಳಿದರು.

"ಬನ್ನಿ, ವಾಕಿಂಗ್ ಹೋಗೋಣ. ಮಿಸ್ಟರ್ ಜಯದೇವರ ಗೌರವಾರ್ಥ ಆನಂದವಿಲಾಸದಲ್ಲಿ ಕಾಫಿ ಕೊಡಿಸ್ತೀನಿ ಬನ್ನಿ."

ಅಂತೂ ಜಯದೇವನಿನ್ನು ಅಪರಿಚಿತನಲ್ಲ. ಉಳಿದ ಇಬ್ಬರ ಸಹೋದ್ಯೋಗಿ. ಮುಂದೆ ಅವರೊಡನೆ ಕಳೆಯಬೇಕಾದ ಸಹಸ್ರ ಸಂಜೆಗಳಲ್ಲಿ ಇದೊಂದು, ಅಷ್ಟೆ. ಆ ವಾತಾವರಣಕ್ಕೆ ಹೊಂದಿ ನಡೆಯುವುದನ್ನು ಅಂದಿನಿಂದಲೇ ಅಭ್ಯಾಸ ಮಾಡಬೇಕು ಆತ.

"ಅಯ್ಯೋ, ಆಗ಼್ೇ ಹಾಗಂದಿದ್ರೆ ರಾತ್ರಿಗೆ ಅಕ್ಕಿಹಾಕ್ಬೇಡಾಂತ ಮನೇಲಿ ಹೇಳ್ತಿದ್ನಲ್ಲಾ" ಎಂದು ರಂಗರಾಯರು ನಕ್ಕು, ಜಯದೇವನನ್ನು ಉದ್ದೇಶಿಸಿ ಅಂದರು:

"ನಮ್ಮ ನಂಜುಂಡಯ್ಯ ಕಾಫಿ ಕುಡಿಸೋ ದಿವಸ ಆನಂದವಿಲಾಸದ ಮಾಲಿಕನ ಭಾಗ್ಯ ಕಣ್ಣು ತೆರೆದ ಹಾಗೆ. ನಡೀರಿ ಹೋಗೋಣ..."

ಅವರು ಮೂವರೂ ಹಾದಿ ನಡೆಯುತ್ತಿದ್ದಂತೆ ಜಯದೇವನ ವಿಷಯವಾಗಿ ಮಾತು ಹೊರಟಿತು.

ನಂಜುಂಡಯ್ಯ ಕೇಳಿದರು:

"ಒಬ್ಬಂಟಿಗ ತಾನೆ ?"

"ಹೌದು ಸಾರ್, ಒಬ್ಬಂಟಿಗ."

"ಹಾಗಾದರೆ ಇಲ್ಲಿ ವಸತಿ ಏರ್ಪಾಟು ಹ್ಯಾಗ್ಮಾಡ್ತೀರ ?"

ಜಯದೇವ ರಂಗರಾಯರ ಮುಖದತ್ತ ನೋಡಿದ. ಅವರೂ ಜಯದೇವನ ಉತ್ತರವನ್ನು ಕುತೂಹಲದಿಂದ ಇದಿರು ನೋಡುತ್ತಿದ್ದರು.

"ಇಲ್ಲಿ ಬಾಡಿಗೆಗೆ ರೂಮುಗಳು ಸಿಗೊಲ್ವೆ ?"

"ಓಹೋ ! ಅದಕ್ಕೇನು ? ಆದರೆ ಊಟ—"

"ಹ್ಯಾಗಾದರೂ ಆಗುತ್ತೆ. ಹೋಟೆಲಲ್ಲಿ ಮಾಡಿದರಾಯಿತು."

ನಂಜುಂಡಯ್ಯ ಸೂಕ್ಷ್ಮವಾಗಿ ಜಯದೇವನನ್ನು ಪರೀಕ್ಷಿಸುತ್ತಲೇ ಇದ್ದರು. ಆ ಪರೀಕ್ಷೆಯ ಒಂದಂಶವಾಗಿಯೇ ಅವರ ಪ್ರಶ್ನೆ ಬಂತು:

"ನೀವು ಯಾವ ಜನ ಮಿಸ್ಟರ್ ಜಯದೇವ್ ? ಹೀಗೆ ಕೇಳಿದೆ ಅಂತ ತಪ್ಪು ತಿಳ್ಕೋಬೇಡಿ."

ಆ ಬೆಳಗಿನಿಂದಲೇ ನಂಜುಂಡಯ್ಯನವರನ್ನು ಪೀಡಿಸುತಿದ್ದ ಪ್ರಶ್ನೆ ಅದು. ರಂಗರಾಯರೂ ಆ ವಿಚಾರವಾಗಿ ಯೋಚಿಸಿದ್ದರು. ಆ ಕಾರಣದಿಂದಲೇ ಅವರಿಬ್ಬರ ಊಟವೂ ಮನೆಯ ಒಳಕೊಠಡಿಯಲ್ಲಿ ಆಗಿರಲಿಲ್ಲ. ಆದರೆ ನೇರವಾಗಿ ಜಯದೇವನನ್ನು ಕೇಳುವುದು ತಪ್ಪೆಂದು, ರಂಗರಾಯರಿಗೆ ತೋರಿತ್ತು. ನಂಜುಂಡಯ್ಯ ಒಮ್ಮೆಲೆ ಕೇಳಿದ್ದನ್ನು ಕಂಡು ರಂಗರಾಯರಿಗೆ ಒಂದು ವಿಧವಾಯಿತು. ಆದರೆ ತಮ್ಮ ಮನಸ್ಸಿನಲ್ಲಿ ಮೂಡಿದ್ದ ಪ್ರಶ್ನೆಗೂ ಈಗ ಉತ್ತರ ದೊರೆಯುವುದೆಂಬ ಸಮಾಧಾನವೂ ಆಗದಿರಲಿಲ್ಲ.

ನೀವು ಯಾವ ಜನ?—ಜಯದೇವ ನಿರೀಕ್ಷಿಸಿದ್ದ ಪ್ರಶ್ನೆ ಬಂದಿತ್ತು. ಆದರೆ ಉತ್ತರ?

ಆತನ ಮೌನ ನಂಜುಂಡಯ್ಯ-ರಂಗರಾಯರಿಬ್ಬರ ಕೌತುಕವನ್ನೂ ಮತ್ತಷ್ಟು ಹೆಚ್ಚಿಸಿತು.

"ನಾನು ಆ ಪ್ರಶ್ನೆ ಕೇಳಬಾರದಾಗಿತ್ತೇನೊ? ತಪ್ಪಾಗಿದ್ದರೆ ಕ್ಷಮಿಸಿ."

"ಛೆ! ಛೆ! ಅದರಲ್ಲೇನು? ಆದರೆ ನನ್ನ ಉತ್ತರದಿಂದ ಪ್ರಶ್ನೆ ಕೇಳೋವರಿಗೆ ಯಾವಾಗ್ಲೂ ತೃಪ್ತಿಯಾಗೋದೇ ಇಲ್ಲ."

"ಹಾಗಂದ್ರೆ ?"

"ನನಗೆ ಜಾತಿ—ಮತದಲ್ಲಿ ನಂಬಿಕೆ ಇಲ್ಲ."

"ಓ !"

ಉದ್ಗರಿಸಿದರು ನಂಜುಂಡಯ್ಯ. ರಂಗರಾಯರಿಗೂ ಆಶ್ಚರ್ಯ ವೆನಿಸದಿರಲಿಲ್ಲ.

ಅನಂತರದ ಮೌನವನ್ನೂ ನಂಜುಂಡಯ್ಯನೇ ಭೇದಿಸಬೇಕಾಯಿತು. ತಮಗೇನೋ ಅವಮಾನವಾದವರಂತೆ ಅವರ ಮುಖ ಕೆಂಪಗಾಗಿತ್ತು.

"ಜಾತಿಗೀತೀಲಿ ಯಾರಿಗೆ ನಂಬಿಕೆ ಇದೆ? ನಮಗಿದ್ಯೇನು? ಸುಮ್ನೆ ಕೇಳಿದೆ, ಅಷ್ಟೆ. ಮನುಷ್ಯರಾಗಿ ಹುಟ್ಟಿದ್ಮೇಲೆ ಜಾತಿ ಅಂತ ಒಂದಿರುತ್ತೆ ಅಲ್ವೆ ?"

ರಂಗರಾಯರಿಗೇನೋ ಜಯದೇವನ ಉತ್ತರ ಅಪ್ರಿಯವಾಗಿ ತೋರಲಿಲ್ಲ. ಆದರೆ, ಹೊಸದಾಗಿ ಅಧ್ಯಾಪಕವೃತ್ತಿಗಿಳಿದಿದ್ದ ಆತನ ವ್ಯಕ್ತಿತ್ವ ಸ್ವಲ್ಪ ವಿಚಿತ್ರವಾಗಿಯೇ ಕಂಡಿತು.

ತನ್ನ ಉತ್ತರವನ್ನು ವಿವರಿಸುವ ತವಕವನ್ನೇನೂ ಜಯದೇವ ತೋರಿಸಲಿಲ್ಲ. ಮನಸ್ಸಿನೊಳಗಿನ ವಿವಿಧ ಭಾವನೆಗಳಿಗೆಲ್ಲ ನಗೆಯನ್ನು ಮುಖವಾಡವಾಗಿ ಮಾಡಿ ಆತ ಮೌನವಾಗಿಯೆ ನಿಂತ.

ಆದರೆ ಉಗುಳು ನುಂಗಿ ಸುಮ್ಮನಾಗುವ ವ್ಯಕ್ತಿಯಾಗಿರಲಿಲ್ಲ ನಂಜುಂಡಯ್ಯ.

"ಹೆಸರು ಜಯದೇವ ಅಂತಿದೆಯಲ್ಲ-ಅದಕ್ಕೆ ಕೇಳಿದೆ."

ಹೆಸರಿನಿಂದಲೆ ಜಾತಿಯನ್ನು ನಿರ್ಧರಿಸುವ ಜಾಣ್ಮೆ—!

"ಹೆಸರಿನ ವಿಷಯ ಕೇಳಿದಿರಾ? ಅದೇನೋ ಸ್ವಾರಸ್ಯವಾಗಿಯೇ ಇದೆ" ಎಂದು ನುಡಿದು ಜಯದೇವ ವಿವರಣೆಯನ್ನಿತ್ತ:

"ಮೂಲ ನಾಮಕರಣ ಜಯ ಅಂತ. ತಂದೆಯ ದಾಖಲೆಯಲ್ಲಿ ಜಯರಾವ್ ಅಂತಾಯ್ತು. ಮನೆಯಲ್ಲಿ ಜಯಣ್ಣನಾದೆ. ಆದರೆ ತಬ್ಬಲಿಯಾದ ನನ್ನನ್ನು ಕೆಲವು ವರ್ಷ ನಿಜವಾಗಿ ಪಾಲಿಸಿ ಪೋಷಿಸಿದವರು ನಮ್ಮ ಪಕ್ಕದ್ಮನೆಯವರು—ಲಿಂಗಾಯತ ದಂಪತಿಗಳು. ಅವರಿಗೆ ಮಕ್ಕಳಿರ್‍ಲಿಲ್ಲ. ನಾನು ಅವರಿಗೆ ಪ್ರೀತಿಯ ಜಯದೇವನಾದೆ. ಕೊನೆಗೆ ಅದೇ ಖಾಯಂ ಆಗ್ಹೋಯ್ತು!...ಯಾಕೆ—ಜಯದೇವ ಅಂತ ಹೆಸರು ಇರ್‍ಬಾರ್ದೆ?"

ನಂಜುಂಡಯ್ಯ ಆ ಮಾತಿಗೆಲ್ಲ ಪುರಸ್ಕಾರವೀಯಲು ನಿರಾಕರಿಸುವ ಧ್ವನಿಯಲ್ಲಿ ಅಂದರು:

"ಇದದೇ ಏನು? ಅಂತೂ ನೀವು ಹೇಳಿದ್ದು ಸ್ವಾರಸ್ಯವಾಗಿಯೇ ಇದೆ!"

ರಂಗರಾಯರಿಗೇನೋ ಈ ಮನೋವೃತ್ತಿ ಹೊಸದಾಗಿರಲಿಲ್ಲ. ಒಂದು ಕಾಲದಲ್ಲಿ ಅವರಿಗೂ ಅಂತಹ ಭಾವನೆಗಳು ಬಂದಿದ್ದವು. ಯೌವನದ ಆ ಆದರ್ಶಗಳನ್ನು ಬೇರೆ ಕೆಲವರಲ್ಲೂ ಅವರು ಕಂಡಿದ್ದರು. ಆ ಆದರ್ಶಗಳ ಬಗೆಗೆ ಅವರಿಗೆ ಉಪೇಕ್ಷೆ ಇರಲಿಲ್ಲ.

ಆದರೆ ಜಯದೇವನ ಉತ್ತರದಿಂದ ನಂಜುಂಡಯ್ಯನ ಮೇಲಾದ ಪ್ರತಿಕ್ರಿಯೆಗಳೇ ಬೇರೆ. ಹೊಸನೇಮಕದ ಅನುಜ್ಞೆ ಪತ್ರ ನೋಡಿದಂದಿನಿಂದ ಜಯದೇವ ಎಂಬ ವ್ಯಕ್ತಿ ತಮ್ಮ ಜನವೇ ಎಂದು ಅವರು ಭಾವಿಸಿದ್ದರು. ವಿದ್ಯಾರ್ಥಿಯಾಗಿದ್ದಾಗಲೆ ಅವರಲ್ಲಿ ಮೈಗೂಡಿ ಬಂದಿದ್ದ ಸ್ವಜಾತಿ ಅಭಿಮಾನ ಜಯದೇವನ ಆಗಮನದಲ್ಲಿ ವಿಶೇಷ ಆಸಕ್ತಿಯನ್ನು ಅವರು ವಹಿಸುವಂತೆ ಮಾಡಿತ್ತು. ಆ ಕಾರಣದಿಂದ ಸಂಜೆ ನಡೆದ ಮಾತುಕತೆಯಿಂದ ಅವರಿಗೆ ಅಸಮಾಧಾನವಾಗದೆ ಇರಲಿಲ್ಲ.

ಆದರೂ ಆದಷ್ಟು ಮಟ್ಟಿಗೆ ಸುಪ್ರಸನ್ನರಾಗಿಯೇ ಅವರು ಆನಂದ ವಿಲಾಸದಲ್ಲಿ ಬೋಂದಿಲಾಡಿಗೂ ತುಪ್ಪದೋಸೆಗೂ 'ಆರ್ಡರು' ಕೊಟ್ಟರು. 'ಸ್ಪೆಷಲ್' ಕಾಫಿ ಬಂತು. ಬೆಂಗಳೂರು ಮತ್ತು ಆ ಊರುಗಳ ಕಾಫಿ ತಿಂಡಿಗಳ ನಡುವಿನ ತಾರತಮ್ಯವೇ ಮಾತುಕತೆಯ ಮುಖ್ಯ ವಿಷಯವಾಯಿತು.

ಅಲ್ಲಿ ನೆರೆದಿದ್ದವರ ಕುತೂಹಲದ ದೃಷ್ಟಿಗಳ ನಡುವೆ ಜಯದೇವ ತನ್ನ ಗೌರವ ವಾಗಿ ತರ್ಪಿಸಲಾದ ತಿಂಡಿ ತೀರ್ಥಗಳನ್ನು ಸ್ವೀಕರಿಸಿದ.

ಹೋಟೆಲಿನಲ್ಲಿ ನಂಜುಂಡಯ್ಯನವರ ಲೆಕ್ಕವಿತ್ತು. ಅವರು ಆ ಪುಸ್ತಕ ದಲ್ಲಿ ದಿನದ ಬಿಲ್ಲನ್ನು ಬರೆದ ಬಳಿಕ, ಮೂವರು ಉಪಾಧ್ಯಾಯರೂ ಹೊರ ಹೊರಟರು. ಬೀದಿಗಿಳಿದಾಗ ನಂಜುಂಡಯ್ಯ ಸಿಗರೇಟಿನ ಕೇಸು ತೆರೆದರು. ಕಡ್ಡಿ ಕೊರೆದು ಹಚ್ಚಿಕೊಳ್ಳುತ್ತಾ ಅವರೆಂದರು:

"ನೀವು ಕಾಂಗ್ರೆಸ್ ಚಳುವಳೀಲಿ ಇದ್ದಿರಾ ಜಯದೇವ್ ?"

"ಇಲ್ಲ. ಯಾಕೆ ಕೇಳಿದಿರಿ."

ಯಾಕೆ ಕೇಳಿದರೊ ? ಜಾತಿಯಲ್ಲಿ ನಂಬಿಕೆ ಇಲ್ಲವೆಂಬ ವಾದಕ್ಕೆ ಆ ಉತ್ತರದಲ್ಲೇನಾದರೂ ತಳಹದಿ ದೊರೆಯುವುದೇನೋ ಎಂದಿದ್ದರು ಅವರು. ಆದರೆ ಆ ಉತ್ತರವೂ ನಿರಾಸೆಯನ್ನೇ ಉಂಟುಮಾಡಿತು.

ಸಿಗರೇಟಿನ ಹೊಗೆಯನ್ನೇನೋ ಅವರು ಸ್ವಲ್ಪ ನುಂಗಿದರು. ಆದರೆ ಜಯದೇವನ ವರ್ತನೆ ನುಂಗಲಾರದ ತುತ್ತಾಗಿತ್ತು.

"ಸುಮ್ನೆ ಕೇಳ್ದೆ—"

ಅದು ಮಾತು ಹಾರಿಸುವ ಯತ್ನ.

"ಬೆಂಗಳೂರ್ನಲ್ಲೆಲ್ಲಾ ರಾಜಕೀಯದಲ್ಲಿ ವಿದ್ಯಾರ್ಥಿಗಳಿಗೆ ಜಾಸ್ತಿ ಆಸಕ್ತಿ ನೋಡಿ. ಹಾಗೆ ನಿಮಗೂ ಎಲ್ಲಾದ್ರೂ—"

ಸುಲಭವಾಗಿ ಗುರುತಿಸುವ ಸುಳ್ಳು.

"ಇಲ್ಲ, ನನಗೆ ರಾಜಕೀಯದಲ್ಲಿ ಆಸಕ್ತಿಯೇ ಇಲ್ಲ. ಅಲ್ದೆ, ನಾನು ಕಾಲೇಜು ಸೇರಿದ ವರ್ಷವೇ ಸ್ವಾತಂತ್ರ್ಯವೂ ಬಂತು. ಜವಾಬ್ದಾರಿ ಸರ್ಕಾರ ಹೋರಾಟದ ಸಮಯದಲ್ಲಿ ಎಲ್ಲರ ಜತೇಲಿ ನಾಲ್ಕು ದಿವಸ ಮುಷ್ಕರ ಮಾಡಿದ್ದು ಎಷ್ಟೋ ಅಷ್ಟೆ...."

"ನಮಗಿಂತೆಲ್ಲಾ ನೀವು ಬಹಳ ಚಿಕ್ಕವರು ಹಾಗಾದರೆ."

"ಹೌದು ಚಿಕ್ಕವ, ಹೊಸಬ. ನಿಮ್ಮ ಜತೇಲಿದ್ರೆ ನಾನೊಬ್ಬ ವಿದ್ಯಾರ್ಥಿಯೋ ಏನೋ ಅನಿಸುತ್ತೆ!"

ಜಯದೇವ ಸಹಜವಾಗಿಯೇ ಪ್ರಾಮಾಣಿಕವಾಗಿಯೇ ಹಾಗಂದ. ತಮ್ಮ ಹಿರಿತನವನ್ನು ಹೊಸ ಉಪಾಧ್ಯಾಯ ಮೆಚ್ಚಿಕೊಂಡುದಕ್ಕಾಗಿ ನಂಜುಂಡಯ್ಯನಿಗೆ ಸಂತೋಷವೇ ಆಯಿತು. ರಂಗರಾಯರು, ಜಾತಿಯ

ಪ್ರಶ್ನೆಯಿಂದ ಕದಡಿದ್ದ ವಾತಾವರಣವನ್ನು ಮಧುರಗೊಳಿಸಲೆಂದು ಮಾತು ತಿರುಗಿಸಿದರು:

"ನೀವೇ ಭಾಗ್ಯವಂತರು ಜಯದೇವ್. ನಾನಂತೂ ಹಣ್ಣೆಲೆ. ನಂಜುಂಡಯ್ಯನೂ ಹಲವು ವರ್ಷಗಳ ಅನುಭವಿಕರು. ಯುವಕರು ನೀವೊಬ್ಬರೇ. ಹೆಚ್ಚು ವರ್ಷಕಾಲ ಉಪಾಧ್ಯಾಯರಾಗಿರೋ ಭಾಗ್ಯ ಈಗಿರೋದು ನಿಮಗೆ !"

ಜಯದೇವನಿಗೆ ನಗು ಬಂತು.

"ಹಣ್ಣೆಲೆಯನ್ನು ನೋಡಿ ಚಿಗುರೆಲೆ ನಗುತ್ತದಂತೆ"

ನಂಜುಂಡಯ್ಯ ಬಲು ಬುದ್ಧಿವಂತಿಕೆಯ ಒಂದು ಮಾತನ್ನು ತಾವು ಹೇಳುತಿದ್ದೇವೆಂದು ಭಾವಿಸುತ್ತ, ಅಂದರು. ಆಗಿನ ಸನ್ನಿವೇಶಕ್ಕೆ ಆ ಮಾತು ತಕ್ಕುದಾಗಲಿಲ್ಲವೆಂಬ ಅಂಶ ಅವರಿಗೆ ಹೊಳೆಯಲಿಲ್ಲ.

"ಆದರೆ ಗಿಡ-ಬಳ್ಳಿಗೆ ಹಣ್ಣು, ಕಾಯಿ ಎಲ್ಲವೂ ಭೂಷಣ ಅಲ್ವೆ?"

ಜಯದೇವನ ಆ ಮಾತಿನಲ್ಲಿ ವಿಶೇಷವಾದ ಬುದ್ಧಿವಂತಿಕೆಯೇನೂ ಇರಲಿಲ್ಲ. ಆದರೂ ರಂಗರಾಯರಿಗೆ ಆ ಮಾತು ಪ್ರೌಢವಾಗಿ ತೋರಿತು.

...ಕತ್ತಲಾಗುತಿದ್ದಂತೆ ಆ ಮೂವರೂ ಮತ್ತೆ ಶಾಲೆಯನ್ನು ದಾಟ ರಂಗರಾಯರ ಮನೆಯನ್ನು ಸಮೀಪಿಸಿದರು.

"ಜಾತಿಯಲ್ಲಿ ನಂಬಿಕೆ ಇಲ್ಲಾ ಅಂದ್ರಿ. ಹಾಗಾದರೆ ಎಲ್ಲಿ ಬೇಕಾದರೂ ಊಟ ಮಾಡೋಕೆ ಸಿದ್ಧ ತಾನೆ?"

ನಂಜುಂಡಯ್ಯ ನಗುತ್ತ ಆ ಪ್ರಶ್ನೆ ಕೇಳಿದ್ದರೂ ಅದಕ್ಕೆ ನೇರವಾದ ಉತ್ತರದ ಆವಶ್ಯಕತೆಯಿತ್ತು.

"ಓಹೋ ! ಧಾರಾಳವಾಗಿ!"

"ಹಾಗಾದರೆ ನಾಳೆ ನಮ್ಮಲ್ಲಿಗೆ ಊಟಕ್ಬನ್ನಿ. ಇವತ್ತಂತೂ ಹೆಡ್ಮೇಷ್ಟ್ರೇ ನಿಮ್ಮನ್ನ ಉಳಿಸ್ಕೊಂಡ್ಬಿಟ್ಟಿದಾರೆ...ಬರ್ತೀರಾ?"

"ಖಂಡಿತ ಬರ್ತೀನಿ."

ಥಟಕ್ಕನೆ ಬಂದ ಆ ಉತ್ತರದಿಂದ ನಂಜುಂಡಯ್ಯ ಚಕಿತರಾದರು. ರಂಗರಾಯರಿಗೂ 'ಈ ಜಯದೇವ ಆಳವಾದ ವ್ಯಕ್ತಿ' ಎನಿಸಿತು. ಇದು ತನ್ನ ವಿಜಯ ಎನ್ನುವಂತೆ ನಂಜುಂಡಯ್ಯ ಮುಖ್ಯೋಪಾಧ್ಯಾಯರ ಮುಖನೋಡಿದರು.

ತಮ್ಮ ಮನೆಯ ಬಾಗಿಲ ಮುಂದೆ ನಿಂತು ರಂಗರಾಯರೆಂದರು :

"ಬನ್ನಿ ನಂಜುಂಡಯ್ಯನವರೇ, ಎರಡು ನಿಮಿಷ ಕೂತು ಹೋದ ರಾಯ್ತು."

"ಇಲ್ಲ ಇಲ್ಲ. ಆಗಲೇ ಲೇಟಾಯ್ತು. ಹೀಗೇ ಹೊರಡ್ತೀನಿ. ನಾಳೆ ಸಿಗ್ತೀನಿ ಮಿ. ಜಯದೇವ್. ಬೆಳಗ್ಗೆ ಬೇಗ್ನೆ ಬಂದು ಊಟಕ್ಕೆ ಕರಕೊಂಡು ಹೋಗ್ತೀನಿ."

ನಂಜುಂಡಯ್ಯ ಕತ್ತಲೆಯಲ್ಲಿ ಮರೆಯಾದಂತೆ ರಂಗರಾಯರು ಜಯ ದೇವನೊಡನೆ ತಮ್ಮ ಮನೆಯನ್ನು ಹೊಕ್ಕರು.

ಮಂದವಾದ ವಿದ್ಯುದ್ದೀಪ ಮನೆಯ ಹಜಾರವನ್ನು ಬೆಳಗಿತ್ತು. ಬರುತ್ತಿದ್ದ ಸಪ್ಪಳವನ್ನು ದೂರದಿಂದಲೆ ಕೇಳಿದ ಸಾವಿತ್ರಮ್ಮ, ಹೊರಬಾಗಿ ಲಿನ ಅಗಣಿ ತೆಗೆದು ಅಲ್ಲೆ ನಿಂತಿದ್ದರು.

"ಹೋಟೆಲಿನಿಂದ ಬರ್‍ತಿದೀರಿ ತಾನೆ? ನಾನಿಲ್ಲಿ ನಿಮಗೇಂತ ಕಾಫಿ ಉಳಿಸ್ಕೊಂಡು ತಿಂಡಿ ಮಾಡಿಟ್ಟು ಕಾದಿರೋದಕ್ಕೂ ನೀವು ಹೀಗ್ಮಾಡೋ ದಕ್ಕೂ—"

ಅದು ಮನೆಯೊಡತಿಯ ಬೇಸರದ ಧ್ವನಿ.

"ನಾನೇನು ಮಾಡ್ಲೆ? ಹೊಸ ಮೇಷ್ಟ್ರು ಬಂದಿದಾರೆ, ಕಾಫಿಗೆ ಹೋಗೋಣ ಬನ್ನೀಂತ ನಂಜುಂಡಯ್ಯ ಎಳಕೊಂಡು ಹೋದ್ರು."

"ನಂಜುಂಡಯ್ನೋ!—ಸರಿ, ಸರಿ!"

ಜಯದೇವ ಕೈಕಾಲು ತೊಳೆದು ಬಂದು, ಹಜಾರದಲ್ಲಿ ತನ್ನ ಹಾಸಿಗೆಯ ಮೇಲೆ ಕಾಲು ನೀಡಿ ಕುಳಿತ.

ಈ ಊರಲ್ಲಿ ಆತ ಕಳೆದ ಮೊದಲ ದಿನ ಸಪ್ಪೆಯಾಗಿರಲಿಲ್ಲ ಅಂತೂ!

...ಊಟದ ಶಾಸ್ತ್ರ ಮುಗಿಸುತಿದ್ದಾಗಲೇ ಸಿಡಿಲು ಗುಡುಗುಗಳು ಸದ್ದು ಮಾಡಿದುವು. ಮಿಂಚು ಮಿಂಚಿತು, ಮಳೆ ಸುರಿಯಿತು. ಹೆಂಚು ಸೋರುತಿದ್ದ ಎರಡು ಕಡೆಗಳಲ್ಲಿ ನೀರು ಹಿಡಿಯಲೆಂದು ಸಾವಿತ್ರಮ್ಮ ಪಾತ್ರೆಗಳನ್ನು ತಂದಿಟ್ಟರು.

...ರಂಗರಾಯರು ಎಲೆ ಅಡಿಕೆ ಹಾಕಿಕೊಂಡರು. ಈ ಅಭ್ಯಾಸವೂ ತನಗಿಲ್ಲವೆಂದ ಜಯದೇವ.

ಮುಖ್ಯೋಪಾಧ್ಯಾಯರು ಸಾವಿತ್ರಮ್ಮನತ್ತ ನೋಡಿ ನಕ್ಕು ಅಂದರು:

"ನನಗೂ ಈ ಅಭ್ಯಾಸ ಇರ್ಲಿಲ್ಲ ಜಯದೇವ. ಆದರೆ ಈ ಅಮ್ಮ ಬಂದ್ಮೇಲೆ—"

"ಸಾಕು ತಮಾಷೆ."

ಹಾಗೆ ನುಡಿದು ಸಾವಿತ್ರಮ್ಮ ಒಳಕ್ಕೆ ಹೊರಟು ಹೋದರು.

ವಯಸ್ಸಾದ ಆ ದಂಪತಿಗಳ ಸರಸ ಕಂಡು ಜಯದೇವನಿಗೆ ನಗುಬಂತು. ಹಾಸಿಗೆಯ ಮೇಲೆ ಅಡ್ಡಾಗುತ್ತಾ ಆತ ತನ್ನಷ್ಟಕ್ಕೆ ಹೇಳಿಕೊಂಡ: 'ಆ ಅಮ್ಮ ಬಂದ್ಮೇಲೆ... ಯಾರಿಗೆ ಗೊತ್ತು? ನನಗೂ ಆ ಅಭ್ಯಾಸವಾಗುತ್ತೋ ಏನೊ...!'

ಹಳೆಯ ಆರಾಮ ಕುರ್ಚಿಯ ಮೇಲೆ ಕುಳಿತಿದ್ದ ರಂಗರಾಯರು ಏನನ್ನೋ ಸ್ಮರಿಸಿಕೊಳ್ಳುತ್ತ ಮಾತನಾಡಿದರು:

"ನಮ್ಮ ನಂಜುಂಡಯ್ಯ ಹೇಳಿದ್ದನ್ನೆಲ್ಲಾ ಕೇಳಿದ್ರೋ ಇಲ್ವೋ?"

"ಕೇಳ್ದೆ ಸಾರ್. ಇದೆಲ್ಲಾ ನನಗೆ ಹೊಸ ಅನುಭವ."

"ಈಗಿನ್ನೂ ಷುರು ಜಯದೇವ!"

"ಇದ್ದೀತು. ರಾಜಕೀಯದಲ್ಲೇನೋ ಜಾತಿ-ಜಾತೀಂತ ಕಚ್ಚಾಡೋದು ಉಂಟಂತೆ. ವಿದ್ಯಾರ್ಥಿಗಳಿಗೆ ಸೀಟು ಸಿಗೋ ವಿಷಯದಲ್ಲಂತೂ ಈ ಗಲಾಟೆ ಇದ್ದದ್ದೇ. ಆದರೆ ಉಪಾಧ್ಯಾಯ ವೃತ್ತೀಲೂ ಹೀಗಿರುತ್ತೆ ಅಂತ ನಾನು ಭಾವಿಸಿರ್ಲಿಲ್ಲ."

"ನಿಮ್ಮ ಮಾತು ಕೇಳಿ ನಗಬೇಕೆನಿಸುತ್ತೆ."

"ಅದು ನಿಜ....ನನಗೇನೂ ತಿಳೀದು."

"ಹಾಗಲ್ಲ. ಏನೇನೋ ಒಳ್ಳೆಯ ಗುರಿ ಇಟ್ಕೊಂಡು ನೀವು ಬಂದಿದೀರಿ ಅಲ್ವೆ?"

ಆ ವಿಷಯ ಜಯದೇವನಿಗೆ ಅತ್ಯಂತ ಆತ್ಮೀಯವಾದುದು.

"ಹೌದು! ಉಪಾಧ್ಯಾಯನಾಗ್ಬೇಕು ಅನ್ನೋದು ನನಗೆ ಮೊದಲಿಂದಲೂ ಇದ್ದ ಆಸೆ. ನಾನು ಬೇರೆ ಕೆಲಸ ಹುಡುಕಲೂ ಇಲ್ಲ."

ರಂಗರಾಯರು ಮಾತುಗಳಿಗೆ ತಡವರಿಸಿದಂತೆ ಕಂಡಿತು.

"ಕನಸು ಕಾಣೋದು ಯಾವಾಗ್ಲೂ ಒಳ್ಳೇದು ಜಯದೇವ್. ಒಳ್ಳೆ ಕನಸು ಕಾಣೋ ಸಾಮರ್ಥ್ಯವಿಲ್ಲದೋರು ಬದುಕಿನಲ್ಲಿ ಹೆಚ್ಚೇನನ್ನೂ ಸಾಧಿ

ಸೋಕ್ಕಾಗಲ್ಲ....ಆದರೆ ಒಂದು ವಿಷಯ. ಈ ಪ್ರಪಂಚದಲ್ಲಿ ನಾವು ಯಾವಾಗ್ಲೂ ಹೆಚ್ಚು ನಿರೀಕ್ಷೆ ಇಟ್ಕೋಬಾರ್ದು. ನಮಗೆ ಯಾವ ಭ್ರಮೇನೂ ಇರಬಾರ್ದು. ಆಗ, ನಿರಾಶೆಯಾದರೆ ಹೆಚ್ಚು ದುಃಖವಾಗೋದಿಲ್ಲ. ಸಂಕಟ ಸಹಿಸ್ಕೊಳ್ಳೋ ಸಾಮರ್ಥ್ಯವಿರುತ್ತೆ. ಅಲ್ವೆ?"

"ಹೌದು."

"ಇದು ನಿರಾಶಾವಾದಿಯ ವೇದಾಂತ ಅಂತ ದಯವಿಟ್ಟು ಭಾವಿಸ್ಬೇಡಿ. ನಿಷ್ಠಾವಂತರಾಗಿ ಉಪಾಧ್ಯಾಯ ವೃತ್ತಿಯ ಹಿರಿಮೆಯನ್ನು ಕಾಪಾಡಿಕೊಂಡಿರುವ ಜನ ಈಗಲೂ ಅಲ್ಲಿ ಇಲ್ಲಿ ಇದಾರೆ. ನೀವೂ ಅವರಲ್ಲಿ ಒಬ್ಬರು ಯಾಕೆ ಆಗಕೂಡದು?"

ಜಯದೇವನೂ ಅದನ್ನೇ ಯೋಚಿಸಿದ–ಯಾಕೆ ಆಗಕೂಡದು?

ಆ ಪ್ರಶ್ನೆಗೆ ಪೂರಕವಾಗುವಂತೆ ರಂಗರಾಯರು ಮತ್ತೂ ಒಂದು ಮಾತೆಂದರು:

"ಅದಕ್ಕೆ ತುಂಬಾ ತ್ಯಾಗ ಮಾಡ್ಬೇಕು. ಈ ಉಪಾಧ್ಯಾಯ ವೃತ್ತಿ ಅನ್ನೋದು ಒಂದು ಮಹಾಯಜ್ಞ."

೪

ಮರುದಿನ ಬೆಳಗ್ಗೆ ನಂಜುಂಡಯ್ಯ ಬರಲಿಲ್ಲ. ಆದರೆ ಒಂಬತ್ತು ಘಂಟೆಗೆ ಒಬ್ಬ ಹುಡುಗ ಬಂದ.

"ನಂಜುಂಡಯ್ಯನವರ ತಮ್ಮ ಬಂದಿದ್ದಾನೆ ಜಯದೇವ," ಎಂದರು ರಂಗರಾಯರು.

"ನಮ್ಮ ಅಣ್ಣ ಹೊಸ ಮೇಷ್ಟ್ರನ್ನ ಕರಕೊಂಡು ಬಾ ಅಂದ್ರು ಸಾರ್." ಎಂದ ಆ ಹುಡುಗನೂ. ಗೌರವದಿಂದ ಆತ ಜಯದೇವನನ್ನೇ ದಿಟ್ಟಿಸು ತಿದ್ದ. ಆ ಕಣ್ಣುಗಳ ಸ್ವಚ್ಛತೆ ಮುಗ್ಧತೆ ಮೋಹಕವಾಗಿದ್ದವು.

ಅದೇ ಆಗ ಸ್ನಾನ ಮುಗಿಸಿದ್ದ ಜಯದೇವ ಹೊರಡಲು ಸಿದ್ಧನಾಗು ತಿದ್ದಂತೆ ರಂಗರಾಯರೆಂದರು:

ನಾನು ಶಾಲೆಗೆ ಹೋಗಿರ್ತೀನಿ. ನಂಜುಂಡಯ್ಯನವರ ಜತೇಲಿ ನೀವು ಹಾಗೇನೇ ಬಂದ್ಬಿಡಿ."

"ಆಗಲಿ."

"ಐದು ನಿಮಿಷ ಬೇಗನೆ ಬನ್ನಿ. ಪಾಠ ಗೊತ್ಮಾಡೋಣ."

"ಹೂಂ......"

ಹಾದಿಯಲ್ಲಿ ಹುಡುಗ ಸಂಕೋಚದಿಂದ ಜಯದೇವನಿಗಿಂತ ಒಂದು ಹೆಜ್ಜೆ ಹಿಂದೆ ಆತನ ಎಡಭಾಗದಲ್ಲಿ ನಡೆದ.

"ನೀನು ಹಿಂದೇನೇ ಇದ್ರೆ ಹ್ಯಾಗಪ್ಪ ನಡೆಯೋದು ? ನಾನು ಹಾದಿ ತಿಳೀದ ಹೊಸಬ."

"ಪರವಾಗಿಲ್ಲ ಸಾರ್. ನಾನಿದೀನಿ."

"ನಿನ್ನ ಹೆಸರು ?"

"ವಿರೂಪಾಕ್ಷ."

"ಯಾವ ಕ್ಲಾಸು ?"

"ಈ ವರ್ಷ ನಾಲ್ಕನೆ ತರಗತಿ ಸಾರ್."

"ಆಮೇಲೆ ಹೈಸ್ಕೂಲ್ಗೆ ಹೋಗ್ಬೇಕು ಅಲ್ವೆ?"

"ಹೂಂ ಸಾರ್."

"ಅಲ್ಲಿ ಮನೆ ಇರೊಲ್ಲ. ಹಾಸ್ಟಲಲ್ಲಿರ್ಬೇಕು."

"ಹೌದು ಸಾರ್. ಹೈಸ್ಕೂಲು–ಕಾಲೇಜು ಎರಡೂ ಬೆಂಗಳೂರಲ್ಲೇ ಓದ್ಬಿಡೂಂತ ನಮ್ಮಣ್ಣ ಅಂತಿದ್ರು."

ಬೆಂಗಳೂರು ಎಂಬ ಹೆಸರನ್ನು ಬಲು ಭಕ್ತಿಯಿಂದ ಆ ಹುಡುಗ ಉಚ್ಚ ರಿಸಿದ್ದ. ಅದು ಆತನ ಪಾಲಿನ ಮಾಯಾನಗರಿ.

ಜಯದೇವನೇನೋ ಹುಡುಗನ ಮಾತಿಗೆ 'ಹೂಂ'ಗುಟ್ಟಿದ. ಆದರೆ ಅವನ ಮನಸ್ಸು ಬೆಂಗಳೂರಿಗೆ ಧಾವಿಸಿತ್ತು. ಆತನ ಓದಿನ ವೈಖರಿ ವಿಚಿತ್ರ ವಾದುದು. ಪ್ರತಿವರ್ಷವೂ ಮುಂದಿನ ವರ್ಷದ ಓದಿನ ಸಂಚಿಕೆ ಇಲ್ಲದೆಯೇ ಆತ ಪರೀಕ್ಷೆಗೆ ಕುಳಿತಿದ್ದ. ಆತನ ಪಾಲಿಗೆ ಪ್ರಾಧ್ಯಾಪಕರ ಪಾಠಗಳಲ್ಲದೆ, ತರಗತಿಯ ಅಧ್ಯಯನಗಳಲ್ಲದೆ, ಬಾಹ್ಯ ಪ್ರಪಂಚವೂ ದೊಡ್ಡ ವಿಶ್ವವಿದ್ಯಾ ನಿಲಯವಾಗಿತ್ತು....

ನಂಜುಂಡಯ್ಯ ಮನೆಯ ಹೆಬ್ಬಾಗಿಲಲ್ಲೇ ನಿಂತಿದ್ದು, ಸ್ವಾಗತಬಯಸಿದರು. ಅವರುಟ್ಟಿದ್ದ ಅಡ್ಡ ಪಂಚೆ, ಮಲ್ಲಿನ ಜುಬ್ಬ, ಅವರ ಪ್ರಕೃತಿಗೆ ಸೌಮ್ಯತೆಯ ವಾತಾವರಣವನ್ನು ಕಲ್ಪಿಸಿದ್ದುವು.

ಅವರ ಕೊಠಡಿಯೂ ಊರಿನ ಆವರಣಕ್ಕಿಂತ ಭಿನ್ನವಾಗಿತ್ತು. ಪುಸ್ತಕಗಳು ತುಂಬಿದ ಬೀರುಗಳೆರಡು. ರಾಜಾರವಿವರ್ಮನಿಂದ ಮೊದಲಾಗಿ ಒಂದು ಪಾಶ್ಚಾತ್ಯ ವಕ್ರಕೃತಿಯವರೆಗೆ, ನಾನಾ ಬಗೆಯ ಚಿತ್ರಗಳು ಅಲ್ಲಿದ್ದುವು. ಬಾಗಿಲಿಗೆ, ಬಣ್ಣ ಬಣ್ಣದ ಗಾಜಿನ ಮಣಿಗಳನ್ನು ಹೊತ್ತಿದ್ದ ತೆಳು ಪರದೆಯನ್ನು ಇಳಿಬಿಟ್ಟಿದ್ದರು. ನಯ ನಾಜೂಕು ಇಲ್ಲದೆ ಹೋದರೂ ಒಳ್ಳೆಯ ಮರದಿಂದ ಮಾಡಿದ್ದ ಮೇಜು–ಕುರ್ಚಿಗಳು. ಹಳೆಯ ಕಾಲದ ಮನೆ. ಕಿಟಕಿಗಳು ಚಿಕ್ಕವಾಗಿದ್ದರೂ ಗೋಡೆಗಳು ದಪ್ಪಗಿದ್ದು ಭದ್ರವಾಗಿದ್ದುವು.

ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಜಯದೇವ ಕಪಾಟಗಳಲ್ಲಿಟ್ಟಿದ್ದ ಪುಸ್ತಕಗಳನ್ನೆ ದಿಟ್ಟಿಸಿದ.

"ಒಳ್ಳೆಯ ಗ್ರಂಥಸಂಗ್ರಹ ಇಟ್ಟಿದ್ದೀರಿ!"

ಹಾಗೆ ಹೊಗಳುವುದರಿಂದ ನಂಜುಂಡಯ್ಯನವರಿಗೂ ಸ್ವಲ್ಪ ತೃಪ್ತಿಯಾಗುವುದೆಂಬುದು ಜಯದೇವನಿಗೆ ತಿಳಿಯದೆ ಇರಲಿಲ್ಲ. ಆ ಮಾತು ಕೇಳಿ ನಂಜುಂಡಯ್ಯನ ಮುಖ ಸ್ವಾಭಾವಿಕವಾಗಿಯೇ ಅರಳಿತು.

"ಪುಸ್ತಕ ಕೊಂಡುಕೊಳ್ಳೋದು ನನ್ನದೊಂದು ಚಟ. ಇಂಥದೇ ಅಂತ ಇಲ್ಲ. ಮೈಸೂರಿಗೋ ಬೆಂಗಳೂರಿಗೋ ಹೋದಾಗಲೆಲ್ಲ ನೂರು-ನೂರು ರೂಪಾಯಿ ಪುಸ್ತಕ ತಂದು ಹಾಕ್ತೀನಿ."

ಒಂದೊಂದು ಸಾರೆಯೂ ನೂರು-ನೂರು ರೂಪಾಯಿ ಬೆಲೆಯ ಪುಸ್ತಕ! ಬಡ ಮಾಧ್ಯಮಿಕ ಶಾಲೆಯ ಉಪಾಧ್ಯಾಯರು ಅಷ್ಟು ಖರ್ಚುಮಾಡ್ತುವುದು ಎಂದಾದರೂ ಸಾಧ್ಯವೆ? ಉಪಾಧ್ಯಾಯ ವೃತ್ತಿ ಅವರ ಸಂಪಾದನೆಯ ಸಾಧನವಾಗಿರಲಿಲ್ಲವೋ ಏನೊ? ಅಷ್ಟು ದೊಡ್ಡ ಮನೆ-ಅವರು ಶ್ರೀಮಂತರೇ ಇರಬೇಕು...

ಆ ಪುಸ್ತಕಗಳು... ಕೈ ಬೆರಳು ಅವುಗಳನ್ನು ಹೆಚ್ಚಾಗಿ ತಡವಿದಂತೆಯೇ ತೋರಲಿಲ್ಲ.

"ಇಂಗ್ಲಿಷ್ ಪುಸ್ತಕಗಳೇ ಜಾಸ್ತಿ, ಅಲ್ವೆ?"

"ಹೌದು, ಹೌದು. ಕನ್ನಡದಲ್ಲಿ ಏನಿದೇಂತ ಕೊಂಡ್ಕೋಬೇಕು?"

ಕನ್ನಡವನ್ನು ಕುರಿತಾದ ಆ ಟೀಕೆ ಜಯದೇವನಿಗೆ ಹಿಡಿಸಲಿಲ್ಲ. ಅದು ನಿಜವಾಗಿರಲಿಲ್ಲ. ಅದರ ವಿಷಯವಾಗಿ ದೀರ್ಘ ಚರ್ಚೆ ನಡೆಸುವುದಕ್ಕೂ ಅವನು ಸಿದ್ಧವಾಗಿದ್ದ. ಆದರೆ ಮನೆಗೆ ಊಟಕ್ಕೆ ಕರೆದಾಗ ಹಾಗೆಲ್ಲ ಮಾತನಾಡದಿರುವುದೇ ಮೇಲೆನಿಸಿತು.

ಹೀಗಿದ್ದರೂ ತಡೆಯಲಾಗದೆ ಹೃದಯದೊಳಗಿನ ನೋವು, ನಾಲಿಗೆಯ ತುದಿ ಚಲಿಸುವಂತೆ ಮಾಡಿತು.

"ಕನ್ನಡದಲ್ಲೇನೂ ಇಲ್ಲ ಅಂತೀರಾ?"

ಸೂಕ್ಷ್ಮಗ್ರಾಹಿಯಾದ ನಂಜುಂಡಯ್ಯ, ಜಯದೇವನ ಮನಸ್ಸಿನಲ್ಲಿದ್ದುದನ್ನು ಊಹಿಸಿಕೊಂಡರು. ಜಯದೇವನ ಆತ್ಮೀಯನಾಗಲೆತ್ನಿಸುತ್ತಿದ್ದ ಅವರೂ ಆ ದಿನ ವೃಥಾ ವಾದಕ್ಕೆ ಸಿದ್ಧರಿರಲಿಲ್ಲ.

"ಹಾಗಲ್ಲ. ಇಂಗ್ಲಿಷಿನಲ್ಲಿರೋ ರೀತಿ ಪುಸ್ತಕಗಳು ಕನ್ನಡದಲ್ಲಿ ಎಲ್ಲಿವೆ ಹೇಳಿ?"

"ಅದು ನಿಜ."

ಅದು ನಿಜವಾಗಿತ್ತು. ಆದರೆ ಹಾಗೆಂದು, ಕನ್ನಡವನ್ನು ದೂಷಿಸುವುದರಲ್ಲಿ ಅರ್ಥವಿರಲಿಲ್ಲ.

ಜಯದೇವ ಪ್ರತ್ಯುತ್ತರ ಹೇಳುವುದನ್ನು ತಡೆಯಬೇಕೆಂದೊ ಏನೋ ನಂಜುಂಡಯ್ಯ ತಮ್ಮ ಮನೆಯ ವೃತ್ತಾಂತ ಹೇಳತೊಡಗಿದರು:

"ನಾವು ನಾಲ್ಕುಜನ ಅಣ್ಣ ತಮ್ಮಂದಿರು. ಮೂವರು ತಂಗಿಯರು. ನಿಮ್ಮನ್ನು ಕರಕೊಂಡು ಬಂದ್ನಲ್ಲ ವಿರೂಪಾಕ್ಷ, ಅವನೇ ಕೊನೆಯವನು. ಹೆಣ್ಣುಮಕ್ಕಳಿಗೆಲ್ಲಾ ಮದುವೆಯಾಗಿದೆ. ತಂದೆಯವರು ತೀರಿಕೊಂಡ್ಮೇಲೆ ಪಾಲಾಯ್ತು. ದೊಡ್ಡಣ್ಣ ಇದೇ ಮನೆಯ ಇನ್ನೊಂದು ಭಾಗದಲ್ಲಿದಾನೆ. ಪೇಟೇಲಿ ಅವನ ರಖಂ ವ್ಯಾಪಾರದ ಅಂಗಡಿ ಇದೆ. ಅವನಿಗಿಂತ ಚಿಕ್ಕೋನು ರೆವಿನ್ಯೂ ಖಾತೇಲಿದಾನೆ-ಲಿಂಗಣ್ಣಯ್ಯ ಅಂತ... ನೀವು ಹೆಸರು ಕೇಳಿದೀರೋ ಏನೋ... ಆತನೂ ಗ್ರ್ಯಾಜುಯೇಟ್..."

ಕೊನೆಯ ಪದಗಳೆರಡು-'ಆತನೂ ಗ್ರ್ಯಾಜುಯೇಟ್' ನಂಜುಂಡಯ್ಯನಿಗೆ ಪದವೀಧರರನ್ನು ಕುರಿತು ಹೆಚ್ಚು ವಿಶ್ವಾಸವಿತ್ತೆಂಬುದರಲ್ಲಿ ಸಂದೇಹವಿರಲಿಲ್ಲ...ತಾನು? ತಾನು ಪದವೀಧರನಲ್ಲ. ಇನ್ನೂ ಎರಡು ವರ್ಷ ಕಲಿಯುವುದು ಸಾಧ್ಯವಾಗಲಿಲ್ಲ ತನ್ನಿಂದ.

ಪುಟ್ಟ ಹೆಣ್ಣು ಮಗುವೊಂದು ತಪ್ಪು ಹೆಜ್ಜೆಗಳನ್ನಿಡುತ್ತಾ "ಅಪ್ಪಾ ಅಪ್ಪಾ," ಎನ್ನುತ್ತಾ ಒಳಕ್ಕೆ ಬಂತು. ಅಪರಿಚಿತನನ್ನು ನೋಡಿ ಅಪ್ಪನೆಡೆಗೆ ಬೇಗ ಬೇಗನೆ ಧಾವಿಸಿತು.

"ನೋಡು, ಯಾರು ನೋಡು. ಮಾವ ಬಂದನ್ರೆ, ಮಾವ...!"

ಹಾಗೆನ್ನುತ್ತ ನಂಜುಂಡಯ್ಯ, ಜಯದೇವನನ್ನು ಮಗುವಿಗೆ ತೋರಿಸಲೆತ್ನಿಸಿದರು. ಆದರೆ ಆ ಮಗು, ನೋಡಲು ನಿರಾಕರಿಸಿ ತಂದೆಯ ಎದೆಯೊಳಗೆ ಮುಖವನ್ನು ಬಚ್ಚಿಟ್ಟಿತು.

"ಮಗಳು ಅಲ್ವೆ?"

ಅಪರಿಚಿತನ ಸ್ವರ ಕೇಳಿ ತನ್ನ ಪುಟ್ಟ ಮುಖವನ್ನೆತ್ತಿ ಒಂದು ಅರೆ ಕ್ಷಣ ಬೆರಗು ನೋಟದಿಂದ ಜಯದೇವನನ್ನು ನೋಡಿತು. ಜಯದೇವ ಮುಗುಳ್ನಕ್ಕ. ಆದರೆ ಆತನ ದೃಷ್ಟಿಯನ್ನು ಸಂಧಿಸಿದೊಡನೆಯೇ ಮಗು ಮತ್ತೆ ತಂದೆಯ ಎದೆಯ ಮರೆಯಲ್ಲಿ ಆಶ್ರಯ ಪಡೆಯಿತು.

"ಹೌದು; ಇನ್ನೊಬ್ಬಳಿದ್ದಾಳೆ ದೊಡ್ಡವಳು."

"ಇಬ್ಬರೇನಾ?"

"ಹೂಂ"

ಸ್ವಲ್ಪ ತಡೆದು ನಂಜುಂಡಯ್ಯನೇ ಅಂದರು:

"ಮೊದಲಿಂದೆರಡೂ ಗಂಡು. ಎರಡೂ ತೀರಿಕೊಂಡ್ವು—"

"ಓ!"

ವಿರೂಪಾಕ್ಷ ಬಂದು, ಊಟದ ಸಿದ್ಧತೆಯಾಗಿದೆಯೆಂದು ಸೂಚನೆಯನ್ನಿತ್ತ. ಆಮಂತ್ರಿತನನ್ನು ಕರೆದುಕೊಂಡು ನಂಜುಂಡಯ್ಯ ಒಳನಡೆದರು.

ಆ ರೀತಿಯ ಊಟ ಜಯದೇವನಿಗೆ ಹೊಸತಾಗಿರಲಿಲ್ಲ.

ದಿನದ ಊಟಕ್ಕಿಂತಲೂ ಆ ದಿನ ಒಂದು ಸಿಹಿ ಜಾಸ್ತಿಯಾಗಿತ್ತು. ಮನೆಯೊಡತಿ ಬಡಿಸಲು ಹತ್ತಿರ ಬಂದೊಡನೆ ನಂಜುಂಡಯ್ಯನೆನ್ನುತ್ತಿದ್ದರು:

"ನೀಡು, ಇನ್ನೂ ಅಷ್ಟು ನೀಡು. ಬೆಂಗಳೂರ್ನೋರ್ಗೆ ಸಂಕೋಚ ಜಾಸ್ತಿ."

ಆ ಮನೆಯೊಡತಿ ಮಾತನಾಡುತ್ತಿರಲಿಲ್ಲ. ಗಾಂಭೀರ್ಯ ತಳೆದಿದ್ದ ಆ ಮುಖದಲ್ಲಿ ಕಣ್ಣುಗಳಷ್ಟೆ ನಿರಂತರವಾಗಿ ಚಲಿಸುತ್ತಾ ಮುಗುಳುನಗು ಸೂಚಿಸುತ್ತಿದ್ದವು. ಎರಡು ಗಂಡು ಮಕ್ಕಳನ್ನು ಕಳೆದುಕೊಂಡಿದ್ದ ಆ ತಾಯಿಯ ಹೃದಯದಲ್ಲಿ ಒಬ್ಬಂಟಿಗನಾದ ಈ ಎಳೆಯನಿಗಾಗಿ–ಜಯದೇವನಿಗಾಗಿ–ವಾತ್ಸಲ್ಯವಿತ್ತು. ಅವರನ್ನು ನೋಡುತ್ತಲಿದ್ದಂತೆ ಜಯದೇವನಿಗೆ ಅವರ ಬಗೆಗೆ ಗೌರವ ಉತ್ಪನ್ನವಾಯಿತು.

ದೂರದಲ್ಲಿ ಬಾಗಿಲ ಬಳಿ ತುಂಬಾ ವಯಸ್ಸಾಗಿದ್ದವರೊಬ್ಬರು ಕುಳಿತಿದ್ದರು. ಅವರನ್ನು ತೋರಿಸುತ್ತ ನಂಜುಂಡಯ್ಯನೆಂದರು:

"ನಮ್ಮಮ್ಮ."

ಆ ಬಳಿಕ ಗಟ್ಟಿಯಾಗಿ ಆ ಅವ್ವನನ್ನುದ್ದೇಶಿಸಿ ಅವರೆಂದರು:

"ಏ ಅವ್ವಾ....ಇವರೇ ನೋಡು ಒಸ್ಮೇಷ್ಟ್ರು."

ಆ ಮಾತು ಕೇಳಿಸಿದಂತೆ ಹಲ್ಲಿಲ್ಲದ ಆ ಬಾಯಿ ಸ್ವಾಗತದ ನಗೆ ನಕ್ಕಿತು. ಕಣ್ಣುಗಳನ್ನು ಕಿರಿದುಗೊಳಿಸುತ್ತಾ ಆ ಮುದುಕಿ ಹೆಚ್ಚು ಸೂಕ್ಷ್ಮವಾಗಿ ಸ್ಪಷ್ಟವಾಗಿ ಹೊಸ ಮೇಷ್ಟ್ರನ್ನು ನೋಡಲೆಳಸಿದಳು. ಆದರೆ ಪುಟ್ಟ ಮೊಮ್ಮಗಳು ಅಜ್ಜಿಯ ಬಳಿಗೋಡಿ ಮಡಿಲನ್ನೇರಲೆತ್ನಿಸುತ್ತಾ ತೊಂದರೆ ಕೊಟ್ಟಳು.

ರುಚಿಕರವಾಗಿದ್ದ ಆ ಊಟ ಮುಗಿಯುತ್ತಾ ಬಂದಂತೆ ನಂಜುಂಡಯ್ಯ ಅಂದರು:

"ನಿನ್ನೆ ನಿಮ್ಮನ್ನ ಊಟಕ್ಕೆ ಕರೆದಾಗ ನೀವು ಬರ್ತೀರಿ ಅಂತ ನನಗೆ ನಂಬಿಕೆ ಇರಲಿಲ್ಲ."

"ಯಾಕೆ?"

"ನಿಮ್ಮ ಜನ ಸಾಮಾನ್ಯವಾಗಿ ನಮ್ಮವರಲ್ಲಿ ಊಟ ಮಾಡೋದಿಲ್ಲ."

ಜಯದೇವನಿಗೆ ನೋವಾಯಿತು.

"ನಮ್ಮ ಜನ ಅಂದರೆ? ದಯವಿಟ್ಟು ಹಾಗೆ ಮಾತಾಡ್ಬೇಡಿ ಸಾರ್. ಜಾತಿ ವಿಷಯದಲ್ಲಿ ನನ್ನ ಅಭಿಪ್ರಾಯ ಏನೂಂತ ನಿನ್ನೆಯೇ ಹೇಳ್ಲಿಲ್ವೆ?"

"ಸಾರಿ, ಕ್ಷಮಿಸಿ."

ಆದರೆ, ಮತ್ತೊಮ್ಮೆ ಜಯದೇವನ ಬಾಯಿಂದ ಆ ಮಾತು ಕೇಳ ಬೇಕೆಂದೇ ನಂಜುಂಡಯ್ಯ ಹಾಗೆ ಅಂದಿದ್ದರು. ಮುಂದಿನ ಅವರ ಬೇರೆ ಮಾತುಗಳಿಗೆ ಆ ನೆಲೆಗಟ್ಟು ಅವಶ್ಯವಾಗಿತ್ತು.

ಅದನ್ನು ತಿಳಿಯಲಾರದೆ ಜಯದೇವ, 'ಈ ಜಾತಿ ಮತಗಳ ಗೀಳಿನಿಂದ ನಮ್ಮ ದೇಶಕ್ಕೆ ಯಾವತ್ತು ಮುಕ್ತಿಯೋ?' ಎಂದು ಚಿಂತಿಸುತ್ತ ಕೊನೆಯ ತುತ್ತನ್ನೆತ್ತಿ ಬಾಯಿಗಿಟ್ಟ.

ಕೈತೊಳೆದು ಬಂದು ಮತ್ತೆ ಕುರ್ಚಿಯ ಮೇಲೆ ವಿರಮಿಸಲೆಂದು ಕುಳಿ ತಾಗಲೂ ಜಯದೇವನ ಮೆದುಳು ಕೆಲಸ ಮಾಡುತ್ತಲೇ ಇತ್ತು.

—ನಂಜುಂಡಯ್ಯ ಸುಸಂಸ್ಕೃತ ನಾಗರಿಕರು, ಪದವೀಧರರು. ಮನೆ ಯಲ್ಲಿ ಒಳ್ಳೆಯ ಯಜಮಾನ. ಊರಲ್ಲೂ ಅವರಿಗೆ ಗೌರವವಿದ್ದೇ ಇರ ಬೇಕು....ಇಂಥವರ ದೃಷ್ಟಿ ವಿಶಾಲವಾಗುವುದು ಸಾಧ್ಯವಿಲ್ಲವೆ?

"ಸಿಗರೇಟಂತೂ ನೀವು ಸೇದೊಲ್ಲ. ಎಲೆ ಹಾಕಿಕೊಳ್ತೀರೇನು?"

ಜಯದೇವನನ್ನುದ್ದೇಶಿಸಿ ಪ್ರಶ್ನೆ ಬಂತು.

"ಇಲ್ಲ ಸಾರ್...ಅದನ್ನೂ ಅಭ್ಯಾಸ ಮಾಡಿಲ್ಲ......"

ನಂಜುಂಡಯ್ಯ ನಕ್ಕರು.

"ನೀವು ಯಾವುದಾದರೂ ಒಂದು ಅಭ್ಯಾಸ ಮಾಡ್ಬೇಕು ಜಯದೇವ್. ಕಡೆಪಕ್ಷ ನಶ್ಯಸಾದರೂ ಹಾಕಿ! ಹುಡುಗರು ಗುರುದಕ್ಷಿಣೆ ಏನಪ್ಪಾ ಕೊಡೋ ದೂಂತ ತಬ್ಬಿಬ್ಬಾಗ್ತಾರ್ರು!"

ತಾನು ಮತ್ತು ನಶ್ಯ! ತಲೆಗೆ ರುಮಾಲು, ಮೂಗಿನ ಮೇಲೆ ಕನ್ನಡಕ, ಮುಚ್ಚುಕಾಲರಿನ ಕೋಟು, ಕೈಯಲ್ಲಿ ಬೆತ್ತ...ಡಬ್ಬ ಹೊರತೆಗೆದು ತೋರು

ಬೆರಳಿಂದ ಅದರ ತಲೆಯನ್ನೊಮ್ಮೆ ತಟ್ಟಿ ಮುಚ್ಚಳ ತೆರೆದು ಒಂದು ಚಿಟಿಕೆ ನಶ್ಯವನ್ನು ಮೂಗಿಗೇರಿಸಿ...

ಜಯದೇವನಿಗೆ ನಗು ತಡೆಯಲಿಲ್ಲ. ಕಣ್ಣ ಮುಂದೆ ಕಟ್ಟಿದ ಆ ಚಿತ್ರ ಕಾಲ್ಪನಿಕವಾಗಿರಲಿಲ್ಲ. ಕಾನಕಾನಹಳ್ಳಿಯ ಮಾಧ್ಯಮಿಕ ಶಾಲೆಯಲ್ಲಿ ಆ ಉಪಾಧ್ಯಾಯರಿದ್ದರು. ತಾನೂ ಹಾಗೆಯೇ—

ನಶ್ಯದ ಗುರುದಕ್ಷಿಣೆಯ ಪ್ರಸ್ತಾಪ ಕೇಳಿ ಜಯದೇವ ನಗುತಿದ್ದಾ ನೆಂದು ನಂಜುಂಡಯ್ಯನೂ ನಕ್ಕರು.

ಅವರು ಕೈಗಡಿಯಾರ ನೋಡಿದರು.

"ಹತ್ತೂಕಾಲು ಈಗ. ಹತ್ತೂವರೆಗೆ ಹೊರಟು ಬಿಡೋಣ."

"ಹೂಂ, ಪಾಠ ಗೊತ್ತುಮಾಡೋದಕ್ಕಿದೆಯಲ್ಲ. ಐದು ನಿಮಿಷ ಮೊದಲೇ ಬಂದ್ಬಿಡೀಂತ ಮುಖ್ಯೋಪಾಧ್ಯಾಯರು ಹೇಳಿದ್ರು."

"ರಂಗರಾಯರು? ನೀವೇನೂ ಯೋಚಿಸ್ಬೇಡಿ. ಟೈಂ ಟೇಬಲ್ ಮೊದಲೇ ಮಾಡಿ ಇಟ್ಟಿರ್ತಾರೆ. ನಾವು ಹೋದ ತಕ್ಷಣ ಮುಂದೆ ಇಟ್ಟು ನಮ್ಮಿಂದ ಸರಿ ಅನ್ನಿಸ್ಕೊಳ್ತಾರೆ! ನಿಮಗಿನ್ನೂ ಅವರ ಪರಿಚಯ ಇಲ್ಲ. ಅವರು ಹಳೇ ಕಾಲದ ಮೆಟ್ರಿಕ್ಯುಲೇಟ್ ಜಯದೇವ್. ಸಾಮಾನ್ಯ ಅಂತ ತಿಳಕೋಬೇಡಿ!"

ನಂಜುಂಡಯ್ಯ ನಗುತ್ತ ಹಾಗೆ ಅಂದಿದ್ದರೂ ಅದು ತಮಾಷೆಯ ಮಾತಷ್ಟೇ ಆಗಿರಲಿಲ್ಲ. ಆ ಸ್ವರದೊಡನೆ ಸೂಕ್ಷ್ಮವಾಗಿ ಬೆರೆತಿದ್ದ ಅಸಹನೆ ಯನ್ನು ಜಯದೇವ ಗುರುತಿಸಿದ. ರಂಗರಾಯರೂ ನಂಜುಂಡಯ್ಯನವರೂ ಅನ್ಯೋನ್ಯವಾಗಿಲ್ಲವೆಂಬುದಷ್ಟು ಆ ಮಾತಿನಿಂದ ಸ್ಪಷ್ಟವಾಯಿತು. ಅಥವಾ ತಾನೇ ಹಾಗೆಂದು ತಪ್ಪು ತಿಳಿದಿರಬಹುದು; ರಂಗರಾಯರನ್ನು ಅವರು ಹೊಗಳುವುದರಲ್ಲಿ ಕೊಂಕು ಎಲ್ಲಿಯದು?—ಎಂದೂ ಒಂದು ಕ್ಷಣ ಜಯದೇವ ಯೋಚಿಸಿದ.

ಆದರೆ ನಂಜುಂಡಯ್ಯನ ಮುಂದಿನ ಪ್ರಶ್ನೆ, ಅಂತಹ ಯೋಚನೆ ಅನ ವಶ್ಯವೆಂದು ಸಾರಿತು.

"ರಂಗರಾಯರು ಏನಾದರೂ ಅಂದ್ರಾ ಜಯದೇವ್?"

ಜಯದೇವ ಯಾಕೋ ಇದೆಲ್ಲಾ ಸರಿಯಾಗಿಲ್ಲಾ ಎಂದುಕೊಂಡರೂ, ಅವನ ಕುತೂಹಲ ಕೆರಳಿತು.

"ಇಲ್ಲ!"

ಆ ಮಾತನ್ನು ನಂಬದವರ ಹಾಗೆ ನಂಜುಂಡಯ್ಯ ಜಯದೇವನನ್ನೆ ನೋಡಿ, ಆತ ನಿಜವನ್ನೆ ಆಡುತ್ತಿದ್ದನೆಂಬುದು ಮನವರಿಕೆಯಾದ ಬಳಿಕ ಸಿಗರೇಟನ್ನು ಎರಡು ಸಾರೆ ಮೇಲಿಂದ ಮೇಲೆ ಸೇದಿ ಹೊಗೆಬಿಡುತ್ತ ಅಂದರು:

"ರಂಗರಾಯರಿಗೆ ಬೇಗನೆ ವರ್ಗವಾಗಬಹುದು."

"ಓ! ನನಗೆ ಗೊತ್ತೇ ಇರ್ಲಿಲ್ಲ. ಹಾಗೇನು?"

"ಹೂಂ. ಕಾರಣ ಗೊತ್ತೆ? ಅವರ ಮೇಲೆ ಆರೋಪಗಳಿವೆ. ಡಿ.ಪಿ.ಐ. ಯವರವರೆಗೂ ಹೋಗಿದೆ ವಿಷಯ. ದೂರ, ಬೇರೆ ಜಿಲ್ಲೆಗೇ ವರ್ಗಮಾಡ್ತಾ ರೇಂತ ಸುದ್ದಿ."

ಆ ಮಾತುಕತೆಯೇನೂ ಹಿತಕರವಾಗಿರಲಿಲ್ಲ. ಹಿಂದಿನ ದಿನವಷ್ಟೇ ಬಲು ಒಳ್ಳೆಯವರೆಂದು ತಾನು ಭಾವಿಸಿದ್ದ ರಂಗರಾಯರೇ ಇಂಥವರಾಗ ಬೇಕೇ?...ಅಥವಾ ಈ ಶಾಲೆಗೆ ಇಬ್ಬರು ಉಪಾಧ್ಯಾಯರೇ ಸಾಕು ಎನ್ನು ವುದಕ್ಕೋಸ್ಕರ ಅವರನ್ನು ವರ್ಗಾಯಿಸುತ್ತಿರಬಹುದೆ?

"ಹಾಗಾದರೆ ಇಲ್ಲಿ ಸಾಲೆಗೆ ಇಬ್ಬರೇ ಸಾಕೇನು?"

"ಯಾಕೆ, ಇನ್ನೊ ಒಬ್ಬರ್ನ ಸಹಾಯಕ್ಕೆ ಕಳಿಸ್ತಾರೆ."

'ಸಹಾಯಕ್ಕೆ' ಎನ್ನುವ ಪದ ಹೊಸ ವಿಷಯವನ್ನು ಜಯದೇವನಿಗೆ ತಿಳಿಸಿತು. ಹಾಗಾದರೆ, ನಂಜುಂಡಯ್ಯನೇ ಇನ್ನು ಮುಖ್ಯೋಪಾಧ್ಯಾಯ ರಾಗುವರು....

ಆ ತಿಳಿವಳಿಕೆ ಜಯದೇವನಿಗೆ ಆಯಿತೆ ಇಲ್ಲವೆ ಎಂಬುದನ್ನೂ ನಂಜುಂಡಯ್ಯ ಗಮನಿಸಿದಂತೆ ತೋರಿತು.

ಅವರು ಪೋಷಾಕು ಧರಿಸಿದರು. ಹಿಂದಿನ ದಿನ ತಾನು ಅದೇ ಸೂಟಿ ನಲ್ಲಿದ್ದ ಅವರನ್ನು ಕಂಡಿದ್ದ.

"ಸೈನ್ಸ್ ಗ್ರಾಜುಯೇಟು ನಾನು ಈ ಕೊಂಪೇಲಿ ಯಾಕಿದೀನೀಂತ ನಿಮಗೆ ಆಶ್ಚರ್ಯ ಆಗ್ಬಹುದಲ್ವೆ?"

"ಮನೆ ಇಲ್ಲೇ ಇದೆ, ಅದಕ್ಕೋಸ್ಕರ."

"ಹೌದು, ಸರಿಯಾಗೇ ಊಹಿಸಿದಿರಿ. ಊರಲ್ಲೆಲ್ಲಾ ಇಲ್ಲಿ ಒತ್ತಾಯ ಮಾಡ್ತಿದಾರೆ: ಬೇಗ್ನೆ ಒಂದು ಹೈಸ್ಕೂಲು ತೆರೀಬೇಕು. ನಾನು ಎಚ್. ಎಂ. ಆಗ್ಬೇಕೂಂತ....ಇವತ್ತಲ್ಲ ನಾಳೆ ಆಗಿಯೇ ಆಗುತ್ತೆ."

ಅದೂ ಜಯದೇವ ಊಹಿಸದೇ ಇದ್ದ ವಿಷಯವಾಗಿತ್ತು. ಆ ಕೂಂಪೆ ಗೊಂದು ಹೈಸ್ಕೂಲು.....

"ಹೈಸ್ಕೂಲು ತೆರೆಯೋಕೆ-ವಿದ್ಯಾರ್ಥಿಗಳು ಸಾಕಷ್ಟು ಇದಾರೆ ಅಲ್ವೆ?"

"ಇಲ್ದೆ ಏನು? ಈ ರೇಂಜಿನವರೆಲ್ಲಾ ಬರ್‍ತಾರೆ. ಊರೂ ಬೆಳೆಯುತ್ತೆ."

ನಾಳೆಯ ದಿನ ಬೆಳೆಯುವ ಬದಲಾಗುವ ಕಲ್ಪನೆಯ ಚಿತ್ರ ಸೊಗಸಾಗಿತ್ತು. ರಂಗರಾಯರೂ ಅಂದಿದ್ದರು-ಕನಸು ಕಾಣುವುದು ಒಳ್ಳೆಯದೆಂದು. ಆ ವಿಷಯದಲ್ಲಿ ನಂಜುಂಡಯ್ಯ ರಂಗರಾಯರಿಬ್ಬರಲ್ಲೂ ಒಂದೇ ಗುಣವಿತ್ತು.

"ಇಷ್ಟು ಚಟುವಟಿಕೆ ಉತ್ಸಾಹ ಇರೋ ಊರು ಸಿಕ್ಕಿದ್ದು ನನ್ನ ಭಾಗ್ಯ" ಎಂದ ಜಯದೇವ ಮರುಕ್ಷಣವೆ, ನಂಜುಂಡಯ್ಯನವರ ಪ್ರೀತ್ಯರ್ಥವಾಗಿ ತಾನು ಹಾಗೆ ಹೇಳಿದೆನೆ, ಎಂಬ ಯೋಚನೆಯುಂಟಾಗಿ ಮನಸ್ಸಿನಲ್ಲಿ ಕಸಿವಿಸಿಯೆನಿಸಿತು.

....ನಂಜುಂಡಯ್ಯ-ಜಯದೇವ ಇಬ್ಬರು ಶಾಲೆಗೆ ಹೊರಟರು. ಹೊಸ ಉಪಾಧ್ಯಾಯರು ತಮ್ಮ ಮನೆಗೆ ಊಟಕ್ಕೆ ಬಂದಿದ್ದರೆಂಬ ಹೆಮ್ಮೆಯಿಂದ ಉಬ್ಬಿದ್ದ ವಿರೂಪಾಕ್ಷನೂ ಪಾಠದ ಪುಸ್ತಕಗಳನ್ನೆತ್ತಿಕೊಂಡು ಅವರಿಬ್ಬರ ಹಿಂದೆಯೇ ನಡೆದ.

ಹಾದಿ ಸಾಗುತಿದ್ದಂತೆ ನಂಜುಂಡಯ್ಯನೆಂದರು

"ನಾನು ತಿಳಿಸಿದ ವಿಷಯ ದಯವಿಟ್ಟು ನಿಮ್ಮಲ್ಲೇ ಇರ್‍ಲಿ. ರಂಗರಾಯರಿಗೆ ಹೇಳ್ಬೇಡಿ."

"ಇಲ್ಲ ಇಲ್ಲ. ನಾನ್ಯಾಕೆ ಹೇಳ್ಲಿ ?"

ಹಾಗನ್ನುತ್ತಾ ಜಯದೇವ ವಿರೂಪಾಕ್ಷನನ್ನು ನೋಡಿದ. ಆ ಹುಡುಗನೆದುರಿನಲ್ಲಿ ಈ ಮಾತನ್ನು ನಂಜುಂಡಯ್ಯ ಆಡಬಾರದಿತ್ತು ಎನಿಸಿತು ಜಯದೇವನಿಗೆ. ಮುಗ್ಧನಾದ, ಒಳ್ಳಿತಿನ ಬಗೆಗೆ ಗೌರವವಿದ್ದ, ಹೊಸತಿನ ಬಗೆಗೆ ಕುತೂಹಲವಿದ್ದ ಹುಡುಗ. ಅವನ ಮನಸ್ಸಿನಲ್ಲೀಗ ಕಲ್ಮಷವೇನೂ ಇರುವುದು ಸಾಧ್ಯವಿರಲಿಲ್ಲ. ಆದರೆ ಇಂತಹ ಮಾತುಗಳನ್ನು ಕೇಳುತ್ತ ಹೋದಂತೆ ಸಂದೇಹಗಳು ಮೂಡಬಹುದು. ದೃಷ್ಟಿ ಕಲುಷಿತವಾಗಬಹುದು. ಒಳ್ಳೆಯ ಮನಸಿಗೆ ಆತುಕೊಂಡು ಅಲ್ಪ ವಿಚಾರಗಳ ಬದನಿಕೆ ಬೆಳೆಯಬಹುದು...

ನಡೆಯುತಿದ್ದಂತೆ ಮೌನ ತರವಲ್ಲವೆಂದು ಜಯದೇವನೆಂದ:

"ರಂಗರಾಯರು ಬೆಳಗ್ಗೆ ಬೇಗ್ನೆ ಶಾಲೆಗೆ ಹೋಗ್ತಾರೇಂತ ಕಾಣುತ್ತೆ."

"ಹೌದು. ಮಧ್ಯಾಹ್ನದ ವಿರಾಮದಲ್ಲಿ ಊಟಕ್ಕೆ ಹೋಗಿಬರ್ತಾರೆ."

ಮುಂದೇನು ಹೇಳಬೇಕೆಂದು ತಿಳಿಯದೆ ಜಯದೇವ ಮೌನವಾದ. ಒಮ್ಮೆಲೆ ಬೇಸರದ ಛಾಯೆಯೊಂದು ಆತನನ್ನು ಆವರಿಸಿ, ಉಸಿರಾಡುವುದು ಕಷ್ಟವಾಯಿತು. ಎಳೆಯ ವಿದ್ಯಾರ್ಥಿಗಳೊಡನೆ ಬೆರೆತು, ಆ ಸುಂದರಲೋಕ ದಲ್ಲಿ ಅವರ ಒಡನಾಡಿಯಾಗಿ, ಭಾವೀ ಪ್ರಜೆಗಳನ್ನು ರೂಪಿಸಲು ನೆರವಾಗುವ ಹಲವೊಂದು ಕನಸುಗಳನ್ನು ಆತ ಕಂಡಿದ್ದ. ಆದರೆ ವಸ್ತುಸ್ಥಿತಿ ಅಷ್ಟು ಸರಳವಾಗಿರಲಿಲ್ಲ: ಆತನ ಕೆಲಸ ಅಷ್ಟು ಸುಲಭವಾಗಿರಲಿಲ್ಲ.

"ತರಗತಿ ವಿಷಯ ಯೋಚಿಸ್ತಿದೀರಾ?"

ಜಯದೇವ ನಿರ್ದಿಷ್ಟವಾಗಿ ಆಲೋಚನೆಯನ್ನು ಮಾಡುತ್ತಿರಲಿಲ್ಲ. ಆದರೂ, ಮನಸಿನಲ್ಲಿದ್ದುದನ್ನೆ ಹೇಳಲಾಗದೆ, ಅವನೆಂದ:

"ಹೂಂ. ಒಂದು ರೀತೀಲಿ ಹಾಗೆಂತ ಅನ್ನಬಹುದು."

"ನನ್ನ ಕೇಳಿದರೆ, ಈ ಪಾಠ ಹೇಳ್ಕೊಡೋದೆಲ್ಲ ಬಹಳ ಸುಲಭ. ಅದರ ಬದಲು ನೀವು ವಸತಿ ಊಟದ ಯೋಚನೆ ಮಾಡ್ಬೇಕು."

"ಅದೂ ನಿಜವೆ !"

"ಏನು ತೀರ್ಮಾನ ಮಾಡಿದಿರಿ? ರಂಗರಾಯರು ಏನಂದ್ರು?"

"ಇನ್ನೂ ಏನೂ ಇಲ್ಲ."

"ಸ್ವಲ್ಪ ಸಮಯ ನೀವು ಶಾಲೆಯಲ್ಲೇ ವಾಸವಾಗಿರೋದು ಮೇಲು. ಊಟ ಬೇಕಾದ್ರೆ—"

"ಸದ್ಯಃ ಯಾವುದಾದರೂ ಹೋಟೆಲ್ನಲ್ಲೇ ಊಟ ಮಾಡೋಣಾಂತಿದೀನಿ."

"ಹಾಗೂ ಆಗ್ಬಹುದು. ಆನಂದವಿಲಾಸದವನಿಗೆ ಹೇಳ್ತೀನಿ. ಸ್ನಾನಕ್ಕೆಲ್ಲ ಅಲ್ಲೇ ಅನುಕೂಲ."

"ಹೂಂ."

ನಿಟ್ಟುಸಿರು ಬಿಟ್ಟು ಹುಬ್ಬು ಹಾರಿಸಿ ನಂಜುಂಡಯ್ಯ ಅಂದರು :

"ನಿಮ್ಮನ್ನ ನೋಡಿದ್ರೆ ನಂಗೆ ಅಸೂಯೆಯಾಗುತ್ತೆ."

"ಯಾಕ್ಸಾರ್ ?"

"ನೀವು ಭಾಗ್ಯಶಾಲಿ. ಒಬ್ಬರೇ ಇದ್ದೀರ! ಭುಜಕ್ಕಿನ್ನೂ ನೊಗ ತಗಲಿಸಿಕೊಂಡಿಲ್ಲ!"

ಬೆಂಗಳೂರಲ್ಲಿ ಆವರೆಗೂ ಯಾರೂ ಆ ರೀತಿ ಜಯದೇವನನ್ನು ಲೇವಡಿ ಮಾಡುತ್ತಿರಲಿಲ್ಲ. ಯಾಕೆಂದರೆ ಅವರೆಲ್ಲರ ಪಾಲಿಗೆ ಆತ ವಿದ್ಯಾರ್ಥಿ. ಈ ಊರಲ್ಲಾದರೆ ಹಾಗಲ್ಲ. ಜಯದೇವ, ಶಾಲೆಯ ಉಪಾಧ್ಯಾಯ. ಸಂಬಳ ಎಷ್ಟಾದರೇನಂತೆ? ತಿಂಗಳ ಸಂಪಾದನೆಯಿದೆ. 'ಯಾಕಿನ್ನೂ ಮದುವೆಯಿಲ್ಲ?'- ಎಂದು ಹತ್ತಾರು ಜನ ಕೇಳುವುದರಲ್ಲಿ ಆಶ್ಚರ್ಯವೇನಿತ್ತು?

ಪ್ರತಿಯೊಬ್ಬ ಗಂಡಸೂ ಹೊತ್ತುಕೊಳ್ಳಬೇಕಾದ ನೊಗದ ಮಾತನ್ನೆತ್ತಿ ನಂಜುಂಡಯ್ಯ ನಕ್ಕರು. ಜಯದೇವನಿಗೂ ನಗು ಬಂತು.

ಅಷ್ಟರಲ್ಲೇ ದೃಷ್ಟಿಯ ಎದುರು ಕಾಣಿಸಿದ ಶಾಲೆಯಿಂದ ಬಾರಿಸಿದ ಘಂಟೆಯ ಸದ್ದು ಕೇಳಿಸಿತು. ಜಯದೇವ ನಗು ನಿಲ್ಲಿಸಿ ಮುಖ ಸಪ್ಪಗೆ ಮಾಡಿಕೊಂಡ.

—ತಡವಾಗಿತ್ತು, ಮೊದಲ ದಿನವೇ!

ನಂಜುಂಡಯ್ಯ ಜಯದೇವನ ಮುಖದ ಮೇಲಿನ ಭಾವನೆಯನ್ನು ಗಮನಿಸಿ, ಬೇಗ ಬೇಗನೆ ಹೆಜ್ಜೆ ಇಟ್ಟರು.

"ಬನ್ನಿ, ರಂಗರಾಯರು ಪಾಠಪಟ್ಟಿ ಹ್ಯಾಗೆ ಸಿದ್ಧಪಡಿಸಿ ಇಟ್ಟಿದಾರೋ ನೋಡೋಣ."

೫

ಮೊದಲ ಮೂರು ತರಗತಿಗಳಿಗೆ ಕನ್ನಡ-ಇತಿಹಾಸ-ಭೂಗೋಳಗಳ ಉಪಾಧ್ಯಾಯನಾದ ಜಯದೇವ.

ರಂಗರಾಯರು ಪ್ರತಿಯೊಂದು ತರಗತಿಗೂ ಆತನನ್ನೊಯ್ದು ಪರಿಚಯ ಮಾಡಿಕೊಟ್ಟರು. ಪ್ರತಿಯೊಂದು ತರಗತಿಯಲ್ಲೂ ಹುಡುಗರು, ಮುಖ್ಯೋಪಾಧ್ಯಾಯರ ಸೂಚನೆಯಂತೆ, ಗಂಟಲು ಬಿರಿದು ಹೋಗುವ ಹಾಗೆ ಜಯದೇವನನ್ನು ಕುರಿತು 'ನಮಸ್ಕಾರ' ಎಂದರು.

ನಾಲ್ಕನೇ ತರಗತಿಯವರೋ ಎಲ್. ಎಸ್. ಪರೀಕ್ಷೆ ಕಟ್ಟುವ ಹುಡುಗರು. ಕೆಲವರಂತೂ ದೊಡ್ಡ ಹುಡುಗರಾಗಿದ್ದರು. ಆರೇಳು ಜನ ಹುಡುಗಿಯರೂ ಇದ್ದರು. ಲಂಗ ಸೀರೆಗಳು. ಹಿಂದಿನ ದಿನ ಆಫೀಸು ಕೊಠಡಿಯಲ್ಲಿ ತಾನು ಕುಳಿತಿದ್ದಾಗ ಆ ಹುಡುಗಿಯರೇ ಅತ್ತಿತ್ತ ಹಾದು ಹೋಗಿರಬೇಕು....ಅದು ಶಾಲೆಯ ಹಿರಿಯ ಹುಡುಗರ ಬಳಗ. ಅವರೆದುರು ತಾನೂ ಒಬ್ಬ ಹುಡುಗನೇ ಎನಿಸಿತು ಜಯದೇವನಿಗೆ. ಅವರೆಲ್ಲರನ್ನೂ ಅಂಕೆಯೊಳಗಿಡುವುದು ತನ್ನಿಂದ ಆಗದ ಮಾತು—ಎಂಬ ಅಳುಕು ಹುಟ್ಟಿತು. ಈ ಉಪಾಧ್ಯಾಯ ವೃತ್ತಿ ತನಗೆ ಸರಿಹೋಗುವುದೋ ಇಲ್ಲವೋ ಎಂಬ ಶಂಕೆ ಮೂಡಿತು...........

ಆದರೆ ಬೇಗನೆ ಆತ ಮೊದಲ ತರಗತಿಗೆ ಹಿಂತಿರುಗಿ ಬಂದು ಬಡಕಲಾದ ಮೇಜಿನ ಹಿಂದಿದ್ದ ಹಳೆಯ ಕುರ್ಚಿಯ ಮೇಲೆ ಹಸನ್ಮುಖಿಯಾಗಿ ಕುಳಿತ.

ಒಂದು ಕ್ಷಣ ಆತನ ದೃಷ್ಟಿಗೆ ಆ ಕೊಠಡಿ ತೇಲುತ್ತಿದ್ದ ತಲೆಗಳ ಸಾಗರವಾಯಿತು. ಮಿದುಳು ಯೋಚಿಸುವುದನ್ನೆ ನಿಲ್ಲಿಸಿತು. ಮಾತನಾಡುವ ಶಕ್ತಿಯನ್ನೆ ಕಳೆದುಕೊಂಡ ಹಾಗಾಯಿತು ನಾಲಿಗೆ.

ಆದರೆ ತುಟಿಗಳ ಮೇಲಿನ ನಗು ಅಳಿಸಿಹೋಗಲಿಲ್ಲ. ಮೊಗ್ಗು ಬಿರಿಯುವಂತೆ ಅದು ಅರಳಿತು. ತಮ್ಮದಲ್ಲದ ಗಾಂಭೀರ್ಯವನ್ನು ನಟಿಸುತ್ತ ಕುಳಿತಿದ್ದ ವಿದ್ಯಾರ್ಥಿಗಳು ಮುಖ ಸಡಿಲಿಸಿ ತಾವೂ ನಕ್ಕರು.

ಎಳೆಯರ ಆ ನಗು ಜಯದೇವನಿಗೆ ನವಚೇತನವನ್ನು ನೀಡಿತು. ಆತ, ಪ್ರತಿಯೊಬ್ಬ ವಿದ್ಯಾರ್ಥಿಯ ಹೆಸರು ಕೇಳಬೇಕೆಂದುಕೊಂಡ. ಆದರೆ ಮರು

ಕ್ಷಣವೆ, 'ನಾನೊಬ್ಬ ಹುಚ್ಚ, ಹಾಜರಿ ಪುಸ್ತಕ ಇದೆಯಲ್ಲ' ಎಂದು ಆ ಪುಸ್ತಕವನ್ನು ತೆರೆದ.

"ಶೇಷಪ್ಪ ಕೆ....ಬಾಲಕೃಷ್ಣ ಎಸ್....ರಾಮಚಂದ್ರ ಶೆಟ್ಟಿ ಟಿ...ಗರು ಡಾಚಾರ್ ಎಲ್...."

ಹುಡುಗರು "ಪ್ರೆಸೆಂಟ್ ಸಾರ್" ಎನ್ನುತ್ತ ಹೋದರು. ಜಯದೇವ ಗುರುತು ಹಾಕುತ್ತ ನಡೆದ.

ಕೊನೆಯಲ್ಲಿ ಹುಡುಗಿಯರ ಹೆಸರುಗಳು....

"ನೀಲಮಣಿ ಎಂ....ಸುಮಿತ್ರಾ ಎಸ್....ಗಂಗೂಬಾಯಿ ಎಂ...."

ಐವರು ಹುಡುಗಿಯರೂ ತರಗತಿಗೆ ಬಂದಿದ್ದರು. ಆದರೆ ಹುಡುಗರಲ್ಲಿ ಹತ್ತಾರು ಜನ ಇರಲಿಲ್ಲ. ಒಂದು ವಾರದಿಂದಲೂ ಅವರು ಬಂದಿರಲಿಲ್ಲ.

"ಯಾಕೆ ಇಷ್ಟೊಂದು ಜನ ಬಂದಿಲ್ಲ?"

ಉತ್ತರ ಕೊಡುವುದೆಲ್ಲ ತನ್ನ ಹಕ್ಕು ಎಂಬಂತೆ ಮೊದಲ ಸಾಲಿನಲ್ಲಿದ್ದ ಒಬ್ಬ ಹುಡುಗ ಎದ್ದು ಕೈಕಟ್ಟಿ ನಿಂತ:

"ಅವರು ಯಾರೂ ಪುಸ್ತಕ ಕೊಂಡ್ಕೊಂಡಿಲ್ಲ ಸಾರ್. ಪುಸ್ತಕ ತರೋವರ್ಗೂ ಕ್ಲಾಸಿಗೆ ಬರ್ಕೂಡದ್ಬಂತ ಸಂಜುಂಡಯ್ಯ ಮೇಷ್ಟ್ರು ಹೇಳಿವಾರೆ ಸಾರ್."

ಜಯದೇವ, ಆ ಹುಡುಗನಿಗೆ ಕುಳಿತುಕೊಳ್ಳಲು ಸನ್ನೆ ಮಾಡಿದ.

ಶುಭಸೂಚಕವಾಗಿರಲಿಲ್ಲ ಆ ಆರಂಭ. ಪುಸ್ತಕ ಕೊಳ್ಳದೆ ಇದ್ದ ಹುಡುಗರು....ಅವನಿಗೆ ಗೊತ್ತಿತ್ತು....ಪುಸ್ತಕ ಕೊಳ್ಳಲಾಗದ ಹುಡುಗರು.... ಹಳೆಯ ಕಥೆಯೇ. ಹಲವು ವರ್ಷಗಳ ಹಿಂದೆ ಮಾಧ್ಯಮಿಕ ಶಾಲೆಯಲ್ಲಿ ಆತ ಓದುತ್ತಿದ್ದಾಗಲೂ ಅಂತಹ ಹುಡುಗರಿದ್ದರು. ಮತ್ತೆ ಈಗಲೂ....

ಆ ವರ್ಷವೇ ಹೊಸದಾಗಿ ಅಚ್ಚಾಗಿ ಬಂದಿದ್ದ ಮೊದಲ ತರಗತಿಯ ಪುಸ್ತಕವನ್ನು-ಕನ್ನಡ ಐದನೆಯ ಪುಸ್ತಕವನ್ನು-ಆಫೀಸು ಕೊಠಡಿಯಿಂದ ಹಿಡಿದುಕೊಂಡು ಜಯದೇವ ಬಂದಿದ್ದ...ಮೊದಲ ಪಾಠದಿಂದಲೇ ಆರಂಭಿಸಬೇಕೆಂದೇನೂ ಇರಲಿಲ್ಲ. ಪುಟಗಳನ್ನು ಮಗುಚುತ್ತಾ ಯಾವುದಾದರೂ ಪದ್ಯವನ್ನು ಓದೋಣವೆಂದುಕೊಂಡ.

ಒಂಬತ್ತನೆಯ ಪಾಠವಾಗಿತ್ತು ಆ ಹಾಡು,

"ಹರಹರ ಮಹಾದೇವ ಶಂಭೋ"

ಆ ಪಲ್ಲವಿಯ ಬಳಿಕ—

“ಬಾಲದಳದವರಾವು ಕಾಲಿಗೆರಗುವೆವು
ಬಾಲಭಟರಾವುಗಳು ಹರಕೆ ಬೇಡುವೆವು”

ಬಾಲದಳದವರ-ಸ್ಕೌಟು ಚಳವಳಿಯ-ಹಾಡು. ಎದುರು ಪುಟದಲ್ಲಿ ಸ್ಕೌಟೊಬ್ಬನ ಚಿತ್ರವೇನೋ ಇತ್ತು. ಆದರೂ ಸ್ಕೌಟು ಚಳವಳಿಯ ಕಲ್ಪನೆ ಆ ಹುಡುಗರಿಗೆ ಇರಲಿಲ್ಲ. ಆ ಹಾಡು ಅಷ್ಟಾಗಿ ಅವರಿಗೆ ರುಚಿಸಲಿಲ್ಲ.

ಒಂದೆಡೆ ಇತ್ತು:

“ಆವ ಸಮಯದೊಳಾರು ಸಾಹ್ಯ ಬೇಡಿದರು
ನಾವೊಡನೆ ಸಿದ್ಧರಾಗಿರುವ ವೃತ್ತಿಯನು”

ಸಾಹ್ಯ-ಅದೆಂತಹ ಪದವೋ! ಜಯದೇವ ಕೊನೆಯ ಪುಟಗಳನ್ನು ಮಗುಚಿ ಟಿಪ್ಪಣಿಯನ್ನೋದಿದ. ಅಲ್ಲೇನೂ ಇರಲಿಲ್ಲ. ಸಹಾಯ ಎಂದೇ ಇರಬೇಕೆಂದುಕೊಂಡ.

“ಈ ಪದ್ಯವನ್ನು ಯಾರಾದರೂ ಓದ್ತೀರೇನಪ್ಪಾ?”

ಒಬ್ಬ ಹುಡುಗನೆದ್ದು ಹೇಳಿದ:

“ನನಗೆ ಬಾಯ್ಪಾಠ ಬರುತ್ತೆ ಸಾರ್.”

“ಹೇಳು ಹಾಗಾದರೆ.”

“ಹರ ಹರ ಮಹಾದೇವ್ವ ಶಮ್ ಭೋ...”

ಆ ಉಚ್ಚಾರವೂ ತಾಳಲಯವೂ ವಿಚಿತ್ರವಾಗಿದ್ದವು.

ಕೊನೆಯ ಸಾಲುಗಳನ್ನಾತ, ಎರಡೂ ಕೈಗಳನ್ನೆತ್ತಿ, ಛಾವಣಿಯ ಹೆಂಚು ಹಾರಿಹೋಗುವ ಹಾಗೆ ಗಟ್ಟಿಯಾಗಿ ಹೇಳಿದ:

“ಭೀಮ ಬಲವನು ಎಮ್ಮ ಬಾಹುವಿಗೆ ಬರಿಸು
ಎಮ್ಮ ದಂಡದೊಳಿರಿಸು ಭೀಮ ಗದೆಯನ್ನು.”

ಅವನು ಹೇಳಿದ ರೀತಿ ಏನೂ ಚೆನ್ನಾಗಿರಲಿಲ್ಲ. ಆದರೂ ಜಯದೇವನೆಂದ: “ಚೆನ್ನಾಗಿ ಹೇಳ್ದೆ. ಕೂತ್ಕೊ.”

ಸತ್ಯಕ್ಕೆ ದೂರವಾದ ಪ್ರಶಂಸೆ! ಆದರೆ ಆ ಸಂದರ್ಭದಲ್ಲಿ ಉತ್ತೇಜನ ನೀಡುವ ಮಾತುಗಳೇ ಮುಖ್ಯವಾಗಿದ್ದುವು.

ಅದೇ ಊರಿನ ಪ್ರಾಥಮಿಕ ಶಾಲೆಯಿಂದ ಉತ್ತೀರ್ಣರಾಗಿ ಬಂದಿದ್ದ ಹುಡುಗರು...ಉಪಾಧ್ಯಾಯನಾದ ತನ್ನಿಂದ ಮೊದಲ ಪಾಠ ಹೇಳಿಸಿ ಕೊಂಡ ತಂಡ......

ಮುಂದಿನ ಪೀರಿಯಡಿನಲ್ಲಿ ಎರಡನೆಯ ತರಗತಿಗೆ ಜಯದೇವ ಹೋದ. ಅಲ್ಲಿಯೂ ಆಗ ಕನ್ನಡವೇ.

ಅಲ್ಲಿ ಹಾಜರಿ ಕರೆದುದಾಗಿತ್ತು. ಬೇರೆ ಹಾದಿಯಿಲ್ಲದೆ ಒಂದೊಂದಾಗಿ ಎಲ್ಲರ ಹೆಸರನ್ನೂ ಕೇಳಿದ. ಎಷ್ಟೊಂದು ವಿಭಿನ್ನವಾದ ಹೆಸರುಗಳು! ದೇವರ ಸಹಸ್ರಹೆಸರುಗಳಿಲ್ಲದೇ ಹೋಗಿದ್ದರೆ ಎಷ್ಟೊಂದು ಕಷ್ಟವಾಗು ತ್ತಿತ್ತೊ ನಾಮಕರಣ ! ವಿವಿಧ ಜಾತಿಗಳು...ಇಲ್ಲಿ ಅಧ್ಯಯನಕ್ಕೆಂದು ಯಾವ ವ್ಯತ್ಯಾಸವೂ ಇಲ್ಲದೆ ಒಂದಾಗಿ ಕುಳಿತಿದ್ದರು...ಅಲ್ಲೆ ಕೊನೆಯ ಸಾಲಿನಲ್ಲಿ ಹರಿಜನರ ಇಬ್ಬರು ಹುಡುಗರೂ ಕೂಡಾ.

ಪಠ್ಯಪುಸ್ತಕದ ಹಾಳೆಗಳನ್ನು ಮಗುಚುತ್ತಾ ಮೊದಲ ಈ ಪೀರಿ ಯಡನ್ನು ಹೇಗೆ ಕಳೆಯೋಣವೆಂದು ಜಯದೇವ ಯೋಚಿಸಿದ.

ಹತ್ತನೆಯ ಪಾಠ, ಪುರಂದರದಾಸರು...

"ಈ ಪರಿಯ ಸೊಬಗಾವ ದೇವರೊಳು ಕಾಣೆ
ಗೋಪೀಜನಪ್ರಿಯ ಗೋಪಾಲಗಲ್ಲದೇ"

ಮೃದುಮಧುರವಾಗಿ ನಿನದಿಸಿತು ಆ ಹಾಡು ಜಯದೇವನ ಕಿವಿ ಯಲ್ಲಿ...ಅದು ಸುನಂದೆಗೆ ಬಲು ಪ್ರಿಯವಾದ ಹಾಡು. ಎಷ್ಟೊಂದು ಸೊಗ ಸಾಗಿ ಹಾಡುತ್ತಿದ್ದಳು ಅದನ್ನಾಕೆ !

"ಯಾರಾದರೂ ಈ ಪಾಠ ಓದ್ತಿರಾ? ಹತ್ತನೆಯ ಪಾಠ-ಮೂವತ್ತೆಂಟ ನೆಯ ಪುಟ."

ಹುಡುಗರು ಒಬ್ಬರೊಬ್ಬರ ಮುಖ ನೋಡಿದರು.

"ಯಾರು ಓದ್ತೀರಾ?"

ಎರಡು ಕೈಗಳು ಮೇಲಕ್ಕೆ ಹೋದವು. ಅವರಲ್ಲಿ ಕಿರಿಯವನಾಗಿದ್ದ ಹುಡುಗನನ್ನು ಜಯದೇವ ಆರಿಸಿದ.

"ನೀನು ಓದಪ್ಪಾ."

ಹುಡುಗ ಓದಿದ ಬಲು ವೇಗವಾಗಿ.

"ಸ್ವಲ್ಪ ನಿಧಾನಿಸಿ ಓದಪ್ಪಾ."

ಆ ಹುಡುಗ ನಿಧಾನಿಸಿ, ಸ್ಫುಟವಾಗಿ, ಹೆಚ್ಚು ತಪ್ಪು ಉಚ್ಚಾರ ಗಳನ್ನು ಮಾಡದೆಯೇ ಓದಿದ.

ಕೃಷ್ಣಪ್ಪನಾಯಕನು ಪುರಂದರ ದಾಸರಾದ ಬಗೆ....ದಾಸ ಪರಂಪರೆ ....ದಾಸ ಕೂಟ....

ಅದು ಕನ್ನಡನಾಡಿನ ಗತ ಇತಿಹಾಸದೊಂದು ಉಜ್ವಲ ಅಧ್ಯಾಯ. ಎಷ್ಟೊಂದು ಅರ್ಥಪೂರ್ಣವಾಗಿತ್ತು ಆ ಪಾಠ ! ಆದರೆ ಆ ಹುಡುಗರು? ಆ ವಿದ್ಯಾರ್ಥಿಗಳೆಲ್ಲ ಒಮ್ಮೆ ಓದುತ್ತಿದ್ದವನ ಮುಖವನ್ನೂ, ಮತ್ತೊಮ್ಮೆ ಮುಗುಳ್ನಗುತ್ತ ತಲೆದೂಗುತ್ತ ಕುಳಿತಿದ್ದ ಜಯದೇವನ ಮುಖವನ್ನೂ ನೋಡುತ್ತಲಿದ್ದರು. ಪಾಠದ ವಿಷಯವೇನೆಂಬುದರ ಬಗೆಗೆ ಹುಡುಗರಲ್ಲಿ ಹೆಚ್ಚಿನವರಿಗೆ ಆಸಕ್ತಿಯೇ ಇದ್ದಂತೆ ತೋರಲಿಲ್ಲ!

ಆ ಪರಿಸ್ಥಿತಿಗೆ ಅವಕಾಶ ಕೊಡಬಾರದೆಂದು ಜಯದೇವ, ಓದು ಮುಗಿದೊಡನೆ, ಪುರಂದರದಾಸರ ಜೀವನವನ್ನು ತಾನೇ ತನ್ನ ಮಾತು ಗಳಲ್ಲೇ ಕಥೆಯ ರೂಪದಲ್ಲಿ ತಿಳಿಸಿದ. ಆ ಕಥನಕ್ರಮ ಸ್ವಾರಸ್ಯಕರ ವಾಗಿತ್ತು. ಹುಡುಗರು ತದೇಕಚಿತ್ತರಾಗಿ ಕೇಳಿದರು. ಗಂಟೆ ಬಾರಿಸಿ ದರೂ ಪಾಠ ನಿಲ್ಲಲಿಲ್ಲ... ನಂಜುಂಡಯ್ಯ ಬಾಗಿಲಬಳಿ ಸುಳಿದ ಹಾಗಾಯ್ತು. ಜಯದೇವ ಒಮ್ಮೆಲೆ ಕಥೆ ನಿಲ್ಲಿಸಿದ... ಹೊತ್ತು ಮೀರಿದ್ದ ಹಾಗೆ ತೋರಿತು. ಮನಸ್ಸಿಲ್ಲದ ಮನಸಿನಿಂದ ಒಬ್ಬ ಹುಡುಗನೆಂದ:

"ಬೆಲ್ಲಾಯ್ತು ಸಾರ್."

"ಓ ಹೌದೆ?"

ಇನ್ನೊಬ್ಬ ಹುಡುಗ ಕೇಳಿದ:

"ಮುಂದೆ ಪುರಂದರ ದಾಸರೇನ್ಮಾಡಿದರು ಸಾರ್?"

"ನಾಳೆ ಹೇಳ್ತೀನಿ—ನಾಳೆ..."

"ಆ ಮೇಲೆ ಭೂಗೋಳಕ್ಕೆ ಬರ್ತೀರಲ್ಲಾ ಸಾರ್. ಆಗ ಹೇಳಿ."

"ಛೆ-ಛೆ? ಭೂಗೋಳದ ಪೀರಿಯಡಿನಲ್ಲಿ ಭೂಗೋಳ!"

ಜಯದೇವ ಹಾಗೆ ನಕ್ಕು ನುಡಿದು ಪುಸ್ತಕವನ್ನೆತ್ತಿಕೊಂಡು ಹೊರ ಬಂದ.

ಗಂಭೀರ ಮುಖ ಮುದ್ರೆಯೊಡನೆ ಜಗಲಿಯಲ್ಲಿ ನಿಂತಿದ್ದ ನಂಜುಂಡಯ್ಯ, ಜಯದೇವನನ್ನು ನೋಡಿ ಮುಗುಳ್ನಕ್ಕರು.

"ಪಾಠ ಚೆನ್ನಾಗಿ ನಡೀತಾ ಇರೋ ಹಾಗಿದೆ."

"ಏನೋ ಕತೆ ಹೇಳ್ದೆ ಸಾರ್."

ಒಮ್ಮೆಲೆ ಮಾಯವಾದ ನಗೆಯನ್ನು ಮತ್ತೊಮ್ಮೆ ಪ್ರಯತ್ನಪೂರ್ವಕವಾಗಿ ನಂಜುಂಡಯ್ಯ ತಂದುಕೊಂಡರು.

ಅಭಿನಂದನೆ ಜಯದೇವರಾವ್. ಹುಡುಗರ್ನ ಹತೋಟೀಲಿ ಇಟ್ಕೊಳ್ಳೋ ಜಾಣ್ಮೆ ನಿಮಗಿದೆ"

ಅಷ್ಟು ಹೇಳಿ ಅವರು ಒಳಹೋದರು. ಮುಂದಿನ ಪೀರಿಯಡು ಜಯದೇವನಿಗೆ ಪಾಠವಿರಲಿಲ್ಲ. ಆತ ಆಫೀಸ್ ಕೊಠಡಿಗೆ ಹೋಗಿ ಕುಳಿತುಕೊಂಡ.

ಒಮ್ಮೆಲೆ ಆತನಿಗೆ ಹೊಳೆಯಿತು...ನಂಜುಂಡಯ್ಯ ತನ್ನನ್ನು ಜಯದೇವರಾವ್ ಎಂದು ಸಂಬೋಧಿಸಿದ್ದರಲ್ಲವೆ?ತಮಾಷೆಗೆ ಹಾಗೆಂದರೇನೋ ...ಆದರೆ ಆ 'ರಾವ್' ಕಿವಿಗೆ ಇಂಪಾಗಿರಲಿಲ್ಲ....

ಜಯದೇವ ಕರವಸ್ತ್ರವನ್ನು ಹೊರತೆಗೆದು ಮುಖದ ಬೆವರೊರೆಸಿದ. ಆತನ ಆತ್ಮವಿಶ್ವಾಸ ಬಲಿಯಿತು. ತಾನು ಯಶಸ್ವಿಯಾದ ಉಪಾಧ್ಯಾಯನಾಗುವುದರಲ್ಲಿ ಸಂದೇಹವಿರಲಿಲ್ಲ. ವೇಣುಗೋಪಾಲ ಎಷ್ಟೋ ಸಾರಿ ತನ್ನನ್ನು ಕುರಿತು ನಗೆಯಾಡಿರಲಿಲ್ಲವೆ ?

"ನೀನು ಮೇಷ್ಟ್ರಾಗೋಕೆ ಹುಟ್ಟಿದ್ದೀನು ಕಣೋ. ಆ ವೃತ್ತಿಗುಣ ನಿನ್ನ ರಕ್ತದಲ್ಲೇ ಇದೆ."

"ಪಾಠ ಹೇಳಿಕೊಡುವುದೂ ಒಂದು ಕಲೆ, ನಿಜ. ಉಪಾಧ್ಯಾಯ ಮನಃಶಾಸ್ತ್ರವನ್ನು ಚೆನ್ನಾಗಿ ಬಲ್ಲವನಾಗಿರಬೇಕು. ಅಪಾರವಾದ ಸಹನಶೀಲತೆ ಆತನಿಗೆ ಇರಬೇಕು.

...ಜಯದೇವ ಯೋಚಿಸುತ್ತ ಹೋದ–

ಅಷ್ಟೇ ಅಲ್ಲ. ಮಕ್ಕಳನ್ನಾತ ಪ್ರೀತಿಸಬೇಕು ; ಅಷ್ಟೇ ಚೆನ್ನಾಗಿ ತನ್ನ ವೃತ್ತಿಯನ್ನೂ ಆತ ಪ್ರೀತಿಸಬೇಕು...

............

ಮಧ್ಯಾಹ್ನದ ವಿರಾಮ ಕಾಲದಲ್ಲಿ ಮುಖ್ಯೋಪಾಧ್ಯಾಯರು ಕೇಳಿದರು :

"ಹ್ಯಾಗಿದೀರಾ ?"

"ಒಳ್ಳೇ ಹುಡುಗರು ಸಾರ್."

"ಹುಡುಗರ ಒಳ್ಳೆತನ ಅಲ್ಲ, ಜಯದೇವ್. ನಿಮ್ಮ ಮುಖ

ನೋಡಿಯೇ ತಿಳ್ಕೊಂಡೆ. ಹುಡುಗರು ನಿಮಗೆ ಅಂಟ್ಕೋತಾರೆ. ಪಾಠ ಮಾಡೋದು ಲೀಲಾಜಾಲವಾಗಿ ಬರುತ್ತೆ ನಿಮಗೆ."

ಏನಾದರೂ ಪ್ರತ್ಯುತ್ತರ ಕೊಡಬೇಕೆಂದು ಜಯದೇವ ತೊದಲಿದ. ಆದರೆ ಮಾತುಗಳು ಗಂಟಲೊಳಗೇ ಸಿಲುಕಿಕೊಂಡವು.

ಮುಖ್ಯೋಪಾಧ್ಯಾಯರೇ ಹೇಳಿದರು :

"ಮೂರು ಜನ ನಾಲ್ಕು ತರಗತಿಗಳಿಗೆ ಪಾಠ ಹೇಳ್ಕೊಡೋದು ಸುಲಭ ಅಲ್ಲ. ಒಂದೊಂದು ಪೀರಿಯಡು ಲೆಕ್ಕ ಪಕ್ಕ ಅಂತ ಮಂತ್ರ ತಂತ್ರ ಮಾಡ್ಬೇಕು. ನೋಡಿ ಜಯದೇವ್, ನಾಲ್ಕನೆ ತರಗತಿಯವರ್ಗೂ ನೀವೇ ಕನ್ನಡ ತಗೊಂಡ್ಬಿಡಿ. ಸುಲಭ....ಏನಂತೀರಾ ?"

"ಆಗಲಿ ಸಾರ್."

ಬೇರೇನೂ ಅನ್ನುವ ಹಾಗಿರಲಿಲ್ಲ.

ರಂಗರಾಯರು ಮಧ್ಯಾಹ್ನದ ಊಟಕ್ಕೆಂದು ಮನೆಗೆ ಹೋದರು. ಇಷ್ಟೊಂದು ತಡವಾಗಿ ಊಟಮಾಡ್ತಾರಲ್ಲ–ಎಂದುಕೊಂಡ ಜಯದೇವ.

ನಂಜುಂಡಯ್ಯ ಕೊಠಡಿಯೊಳಕ್ಕೆ ಬಂದವರೇ ಕೇಳಿದರು :

"ತಿಂಡಿ ಏನು ತರಿಸೋಣ ಜಯದೇವ್ ?"

"ತಿಂಡಿ?"

"ಹೂಂ. ಉಪಹಾರಕ್ಕಿರೋದು ಕಣ್ರೀ ಈ ವಿರಾಮ!"

"ನಿಮ್ಮನೆ ಊಟ ಭರ್ಜರಿಯಾಗಿತ್ತು. ಆದಾಮ್ಲೇಲೆ–"

ಆ ಹೊಗಳಿಕೆಯಿಂದ ನಂಜುಂಡಯ್ಯನಿಗೆ ಉಂಟಾದ ಸಂತೃಪ್ತಿ, ತುಟಿಗಳ ಮಾಸಿದ ಕನ್ನಡಿಯ ಮೇಲೆ ಕಂಡೂ ಕಾಣದಂತೆ ನಗೆಯಾಗಿ ಪ್ರತಿಬಿಂಬಿಸಿತು.

"ಆ ಊಟ ಯಾವ ಲೆಕ್ಕಕ್ಕೆ ? ನಿಮ್ಮ ವಯಸ್ನಲ್ಲಿ ನಾನು–ನಾನ್ಯಾಕೆ ಹೇಳ್ಲಿ ಅದನ್ನ? ಬೆಂಗಳೂರಿಗೆ ಹೋದಾಗ ಬಳೇಪೇಟೆ ಹೋಟ್ಲಲ್ಲಿ ನೀವೇ ವಿಚಾರ್ಸಿ... ಈಗ ಹೇಳಿ, ಇಡ್ಲಿ–ವಡೆ ತರ್ಸ್ಲೋಣ್ವೊ?"

ಜಯದೇವ ಒಪ್ಪಿಕೊಳ್ಳದೆ ನಿರ್ವಾಹವಿರಲಿಲ್ಲ.

"ಆದರೆ ಒಂದು ಶರತು ಸಾರ್. ದುಡ್ಕೊಡೋನು ನಾನು!"

"ಯಾಕೊ ! ಇವತ್ತು ಒಂದಿನ ಸುಮ್ನಿದ್ಬಿಡಿ. ನಾಳೆಯಿಂದ ನೀವೇ ಕೊಟ್ಟರಾಯ್ತು. ಬೇಡಾ ಅಂತ ನಾನೇನೂ ತಡೆಯೊಲ್ಲ..."

ನಂಜುಂಡಯ್ಯನ ತಮ್ಮ ವಿರೂಪಾಕ್ಷನೂ ಅವನ ಜೊತೆಯಲ್ಲಿ ಇನ್ನೊಬ್ಬ ಹುಡುಗನೂ ಆನಂದವಿಲಾಸಕ್ಕೆ ಹೋಗಿ ತಿಂಡಿ-ಕಾಫಿ ತಂದರು.

ತಿಂಡಿತಿನ್ನುತ್ತ ನಂಜುಂಡಯ್ಯ ಹೇಳಿದರು :

"ಆಗ ನಾನು ನಿಮ್ಮನ್ನ ಜಯದೇವರಾವ್ ಅಂತ ಕೂಗ್ದೆ."

ಒಂದು ಗುಟುಕು ಕಾಫಿ ಕುಡಿದು ತಿಂಡಿಯನ್ನು ಗಂಟಲಿನೊಳಗಿಂದ ಕೆಳಕ್ಕೆ ತಳ್ಳುತ್ತಾ ಜಯದೇವನೆಂದ :

"ಹೌದು. ಆಗ್಩ೇ ಹೇಳೋಣಾಂತಿದ್ದೆ. ಮರ್ತ್ಹೋಯ್ತು."

"ಏನು, ಹಾಗೆ ಕೂಗ್ಬಾರ್ದೂಂತ್ಲೆ ?"

"ಯಾಕೋ ಆ ಸಂಬೋಧನೆ ನನಗೆ ಇಷ್ಟವಿಲ್ಲ."

"ಹೋಗಲಿ ಬಿಡಿ. ತಮಾಷೆಗಂದೆ. ಮನಸ್ಸಿಗೆ ಹಚ್ಕೋಬೇಡಿ."

ಅಂತೂ ಜಯದೇವ ಸ್ವಲ್ಪ ವಿಚಿತ್ರವಾಗಿಯೆ ನಂಜುಂಡಯ್ಯನಿಗೆ ತೋರಿದ.

ಉಪಾಹಾರ ಮುಗಿದು ನಂಜುಂಡಯ್ಯ ಸಿಗರೇಟು ಹಚ್ಚಿದರು. ಸಿಗರೇಟಿನ ಹೊಗೆಯೊಡನೆ ಅವರ ಯೋಚನೆಗಳೂ ಸುರುಳಿ ಬಿಚ್ಚಿದುವು...

"ಈ ಶಾಲೇನ ನಾವು ತುಂಬಾ ಸುಧಾರಿಸ್ಬೇಕು ಜಯದೇವ್."

"ಹೌದು, ಹಾಗ್ಮಾಡ್ಬೇಕು."

"ನಿಮ್ಮಂಥವರ ಸಹಾಯ ಇದ್ರೆ ಈ ಸುಧಾರಣೆಯೆಲ್ಲ ದೊಡ್ಡ ಕೆಲಸ ವಲ್ಲ."

—ಅದು, 'ನೀವು ಮತಕೊಟ್ಟರೆ ನಾನು ಚುನಾಯಿಸಿ ಬರುತ್ತೇನೆ' ಎನ್ನುವ ಧ್ವನಿಯಾಗಿತ್ತು. ಜಯದೇವನಿಗೆ ಏನೊಂದೂ ಸ್ಪಷ್ಟವಾಗಲಿಲ್ಲ.

"ನಾನು ಇರೋದೇ ದುಡಿಯೋದಕ್ಕೋಸ್ಕರ ಅಲ್ವೆ?"

"ದುಡಿಯೋದಕ್ಕೇನ್ರಿ—ಎಲ್ರೂ ದುಡೀತಾರೆ. ಆದರೆ, ಸುಧಾರಣೆ ಏನೂಂತ ತಿಳ್ಕೊಂಡು ಮಾಡೋರು ಬೇಡ್ವೆ ?"

-ಹಾಗಾದರೆ ಈ ವರೆಗೂ ಸುಧಾರಣೆ ಎಂದರೇನೆಂಬುದು ರಂಗರಾಯ ರಿಗೆ ತಿಳಿದೇ ಇರಲಿಲ್ಲವೆಂದು ಅರ್ಥವೆ ? ಪರೋಕ್ಷವಾಗಿ ಬಲು ಸೂಕ್ಷ್ಮವಾಗಿ ರಂಗರಾಯರನ್ನು ನಂಜುಂಡಯ್ಯ ಅವಹೇಳನ ಮಾಡಿದಂತಾಯಿತಲ್ಲವೆ ?

ಯೋಚನೆಗಳನ್ನೆಲ್ಲ ಮರೆಮಾಡಿ ಜಯದೇವ ಹೇಳಿದ:

"ಅದಕ್ಕೇನು? ನಾವು ಮೂವರೂ ಕೂತು ಚರ್ಚಿಸಿದರಾಯಿತು."

ನಂಜುಂಡಯ್ಯ ಕಿಟಕಿಯ ಮೂಲಕ ಹೊರನೋಡುತ್ತ ಅಂದರು:

"ರಂಗರಾಯರ ಕೈಲಿ ಚರ್ಚೆ ಅನ್ನೋದೇ ಇಲ್ಲ. ಬೆಳಗ್ಗೆ ನೋಡಿದ್ರೊ ಇಲ್ವೊ? ನಾನು ಏನು ಹೇಳಿದ್ದೆ? ನಾವು ಬರೋಕ್ಮುಂಚೇನೆ ಟೈಂ ಟೇಬಲ್ ಮಾಡಿ ಇಟ್ಟಿರ್ಲಿಲ್ವೆ?"

ಆ ಮಾತಿನಲ್ಲಿ ಸತ್ಯಾಂಶವೂ ಇದ್ದಂತೆ ತೋರಿತು. ಆದರೆ ಹಾಗೆ ಅವರೊಬ್ಬರೇ ತಯಾರಿಸಿದ ಟೈಂಟೇಬಲು ಅಸಮರ್ಪಕವೇನೂ ಆಗಿರಲಿಲ್ಲ.

ಒಂದು ರೀತಿಯ ಗೌರವ ಸೂಚನೆ ಎಂಬಂತೆ ಜಯದೇವನೆಂದ:

"ಅವರದು ಹಳೇ ಕಾಲದ ಮರ್ಜಿ."

ಅದಕ್ಕೆ ತಾತ್ಸಾರದ ಒಪ್ಪಕೊಡುತ್ತ ನಂಜುಂಡಯ್ಯ ಅಂದರು:

"ಹೌದು; ಬಹಳ ಹಳೇ ಕಾಲದ ಮರ್ಜಿ."

## ೬

ಸಂಜೆ ಶಾಲೆ ಬಿಟ್ಟು ಮೂವರು ಉಪಾಧ್ಯಾಯರೂ ಹೊರಟಾಗ, ಹಾದಿಯಲ್ಲಿ ಆ ಊರಿನ ಪ್ರಾಥಮಿಕ ಶಾಲೆಯ ಉಪಾಧ್ಯಾಯರಿಬ್ಬರು ಕಾಣಲು ದೊರೆತರು. ಒಬ್ಬರು ಅದೇ ಊರಿನ ನಿವಾಸಿ. ಇನ್ನೊಬ್ಬರ ಸ್ಥಳ, ಐದು ಮೈಲುಗಳಾಚೆಯ ಹಳ್ಳಿ.

"ಹಳ್ಳಿಗೆ ಹೊರಟ್ರಾ ತಿಮ್ಮಯ್ಯನವರೇ ?"

ಸುಖದುಃಖ ವಿಚಾರಿಸುವ ಧ್ವನಿಯಲ್ಲಿ ರಂಗರಾಯರು ಕೇಳಿದರು.

"ಹೂಂ ಸಾರ್. ಇನ್ನುಬಿರ್ಬಿರ್ನೆ ಮನೆ ಸೇರಿದ್ರೂ ಕಷ್ಟ. ಎಷ್ಟೊತ್ತಿ ಮಳೆ ಬರ್ತದೋ ಎಂಗೇಳೋಣ?"

ಪ್ರಾಥಮಿಕ ಶಾಲೆಯ ಆ ಇಬ್ಬರು ಉಪಾಧ್ಯಾಯರಿಗೂ ವಯಸ್ಸಾಗಿತ್ತು. ೨೫-೧-೫೪ ರ ಜಾತಿ. ಆಗ ನಾಲ್ವತ್ತನ್ನು ಸಮೀಪಿಸಿತ್ತೇನೋ ಸಂಬಳ....

ಇನ್ನೊಬ್ಬ ಉಪಾಧ್ಯಾಯರು,ಕೊಳೆಯಾಗಿದ್ದ ರುಮಾಲನ್ನು ಹಣೆಯ ಕೆಳಕ್ಕೆ ಸರಿಸಿದರು. ಮಾಸಿದ ಕೋಟಿನ ಜೇಬಿನೊಳಗಿಂದ ಹೊರತೆಗೆದರು.... ನಶ್ಯ....

ಇವರಲ್ಲಿ ಮುಖ್ಯೋಪಾಧ್ಯಾಯರು ಯಾರಿರಬಹುದು ಎಂದು ತರ್ಕಿಸಿದ ಜಯದೇವ. ಊಹಿಸುವುದು ಸುಲಭವಾಗಿರಲಿಲ್ಲ. ಯಾವ ವ್ಯತ್ಯಾಸವೂ ಇರಲಿಲ್ಲ ಅವರಿಬ್ಬರೊಳಗೆ. ಯಾರು ಮುಖ್ಯೋಪಾಧ್ಯಾಯರಾದರೂ ಒಂದೇ ಎನಿಸಿತು ಜಯದೇವನಿಗೆ.

ನಶ್ಯ ಮೂಗಿಗೇರಿಸಿದವರು ಜಯದೇವನನ್ನು ನೆಟ್ಟ ದೃಷ್ಟಿಯಿಂದ ನೋಡಿ ಕೇಳಿದರು :

"ಇವರು ಯಾರು ?"

ನಂಜುಂಡಯ್ಯನಿಗೆ ಆ ಸರಸಸಂಭಾಷಣೆಯೇನೂ ಮೆಚ್ಚುಗೆಯಾದಂತೆ ತೋರಲಿಲ್ಲ. ಯಾರೋ ಬಡ ಸಂಬಂಧಿಕರ ಬಳಿ ಇದ್ದಂತೆ ಅವರು ನಿಂತಿದ್ದರು. ಉತ್ತರವಿತ್ತವರು ರಂಗರಾಯರೇ....

"ಇವರು ಜಯದೇವ ಅಂತ. ಬೆಂಗಳೂರ್ನೋರು. ಹೊಸ ಉಪಾಧ್ಯಾಯರಾಗಿ ಬಂದಿದಾರೆ."

ಜಯದೇವ ಸೂಕ್ಷ್ಮವಾಗಿ ಅವರಿಬ್ಬರನ್ನೂ ಗಮನಿಸಿದ. ತನ್ನ ಹೆಸರು ಕಿವಿಗೆ ಬಿದ್ದೊಡನೆ ಅವರ ಮನಸ್ಸಿನಲ್ಲಿ ಏನು ತರ್ಕ ನಡೆದಿರಬಹುದೆಂಬುದನ್ನು ಊಹಿಸುವುದು ಆತನಿಗೆ ಕಷ್ಟವಾಗಲಿಲ್ಲ....ಮತ....ಜಾತಿ.... ತನ್ನ ಹೆಸರು ಕೇಳಿ ತನ್ನನ್ನು ನೋಡಿ, ಎಷ್ಟೋ ಜನ ವಿಧವಿಧವಾಗಿ ಯೋಚಿಸುವ ಪ್ರಮೇಯವನ್ನು ನೆನೆಸಿ ಜಯದೇವನಿಗೆ ನಗು ಬಂತು.

ಆ ಉಪಾಧ್ಯಾಯರಿಬ್ಬರೂ ನಮಸ್ಕರಿಸಿದರೆಂದು ಜಯದೇವನೂ ಪ್ರತಿನಮಸ್ಕಾರ ಮಾಡಿದ.

"೬೦—೫—೯೦ ರವರೋ, ೪೦—೨—೫೦ ರವರೋ ?"

ಅಷ್ಟು ವರ್ಷಗಳ ಉಪಾಧ್ಯಾಯ ವೃತ್ತಿಯ ಬಳಿಕವೂ ತಿಮ್ಮಯ್ಯ ಮೇಷ್ಟ್ರಲ್ಲಿ ಹಾಸ್ಯ ಪ್ರವೃತ್ತಿಯ ಕಿಡಿ ಜೀವಂತವಾಗಿ ಉಳಿದಿದ್ದಂತೆ ಕಂಡಿತು.

ಆ ಮಾತು ನಂಜುಂಡಯ್ಯನಿಗೆ ಏನೇನೂ ಇಷ್ಟವಾಗಲಿಲ್ಲವೆಂಬುದನ್ನು ಸಾರಿ ಹೇಳಿತು ಅವರ ಮುಖಮುದ್ರೆ. ರಂಗರಾಯರು ಮಾತ್ರ ತಿಮ್ಮಯ್ಯ ಮೇಷ್ಟ್ರ ಮಾತು ಕೇಳಿ ನಕ್ಕರು.

"ಇಂಟರ್ ಮೀಡಿಯೆಟ್ ಮುಗಿಸಿದಾರೆ."

"ತಪ್ಪು ತಿಳ್ಕೋ ಬೇಡೀಪ್ಪಾ.....ನಾವು ಹಳ್ಳಿಯೋರು.....ಬೆಂಗಳೂರ್ನೋರ್ಜತೇಲಿ ಮಾತನಾಡಿ ಅಭ್ಯಾಸ ಇಲ್ಲಾ...."

ನಾಟಕದ ಒಬ್ಬ ಪಾತ್ರಧಾರಿಯ ಹಾಗಿದ್ದರು ತಿಮ್ಮಯ್ಯ.

ಆ ವೃತ್ತಿ ಬಾಂಧವರನ್ನು ಬೀಳ್ಕೊಟ್ಟ ಮೇಲೆ, ಮುಂದೆ ನಡೆಯುತ್ತಾ ರಂಗರಾಯರೆಂದರು :

"ಆ ತಿಮ್ಮಯ್ಯನಿಗೆ ನಾಟಕದ ಖಯಾಲಿ ಜಾಸ್ತಿ, ಜಯದೇವ್."

"ಅವರ್ನ ನೋಡ್ದಾಗ ನನಗೂ ಹಾಗೇ ಅನಿಸ್ತು."

ನಂಜುಂಡಯ್ಯ ಮಾತ್ರ ಕಟುವಾಗಿ ಅಂದರು :

"ನಾಟಕ! ಹುಂ! ಶಾಲೆಗೆ ರಜಾ ಕೊಟ್ಟು, ಹುಡುಗರ್ನ ಮನೆಗೆ ಕಳಿಸಿ, ನಾಟಕದ ಮಜಾ ಈ ಮೇಷ್ಟ್ರಿಗೆ.....ಇಂಥವರಿಂದಾನೇ ಈಗಿನ ವಿದ್ಯಾಭ್ಯಾಸ ಕೆಟ್ಟಿರೋದು."

ಜಯದೇವನಿಗೆ ಆ ಖಂಡನೆ ಒಪ್ಪಿಗೆಯಾಗಲಿಲ್ಲ. ಹಾಗೆಂದು ಸ್ಪಷ್ಟ

ವಾಗಿ ಹೇಳಬೇಕೆನ್ನಿಸಿತು. ಆದರೆ ವಿರಸಕ್ಕೆ ಎಡೆಯಾಗುವುದೇನೋ ಎಂದು ಆತ ಸುಮ್ಮನಾದ. ರಂಗರಾಯರು ಮಾತ್ರ ಸುಮ್ಮನಿರುವಂತೆ ತೋರಲಿಲ್ಲ.

"ಹುಡುಗರ ವಿದ್ಯಾಭ್ಯಾಸ ಕೆಡೋದಕ್ಕೆ ನಾಟಕ ಕಾರಣ ಅಂತ ಹ್ಯಾಗೆ ಹೇಳ್ತೀರಿ ನಂಜುಂಡಯ್ಯ? ನಾಟಕವೇ ಬೇಡ ಅಂದ್ರೆ ಸಾಂಸ್ಕೃತಿಕ ಚಟುವಟಿಕೆ ಅನ್ನೋದಾದ್ರೂ ಎಲ್ಲಿರುತ್ತೆ? ಏನೋಪ್ಪಾ, ನಿಮ್ಮ ಮಾತು ಸರೀಂತ ನನಗೆ ತೋರೋಲ್ಲ."

ಇದೊಂದೇ ಭಿನ್ನಾಭಿಪ್ರಾಯವಾಗಿದ್ದರೆ, ಅದಕ್ಕೆ ಮಹತ್ವ ಕಲ್ಪಿಸ ಬೇಕಾದ ಅಗತ್ಯವಿರಲಿಲ್ಲ. ಆದರೆ ಅದರ ಹಿಂದೆ ಬೇರೆ ಕಹಿ ವಿಚಾರಗಳೆಲ್ಲ ಹೊಗೆಯಾಡುತ್ತಿದ್ದುವು. ಮುಂದೆ ಮಾತು ಹೇಗೆ ಬೆಳೆಯುವುದೋ ಎಂದು ಜಯದೇವನಿಗೆ ಕಾತರವೆನಿಸಿತು.

ನಂಜುಂಡಯ್ಯನೆಂದರು :

"ಆ ಮಾತು ಅಷ್ಟಕ್ಕೆ ಬಿಟ್ಬಿಡೋಣ ಸಾರ್. ಅದೇನೂ ಹೊಸ ವಿಷಯ ಅಲ್ವಲ್ಲ. ಎಷ್ಟು ಸಲ ಚರ್ಚೆ ಮಾಡಿದೀವೊ ಏನೋ."

"ಹಾಗೇ ಆಗ಼್ಿ, ನೀವಾಗಿಯೇ ನಾಟಕದ ಮಾತೆತ್ತಿದ್ರಲ್ಲಾಂತ ನಾನು ಹಾಗಂದೆ."

ನಂಜುಂಡಯ್ಯ ಮೌನವಾಗಿದ್ದು, ಅಲ್ಲಿಂದ ಮತ್ತೆಲ್ಲಿಗೋ ಬೆಳೆಯ ಬಹುದಾಗಿದ್ದ ಆ ಸಂಭಾಷಣೆಯ ಪ್ರಕರಣವನ್ನು ಆ ರೀತಿ ಚುಟುಕಾಗಿ ಮುಕ್ತಾಯಗೊಳಿಸಿದರು.

ಆನಂದ ವಿಲಾಸದಲ್ಲಿ ಸಂಜೆಯ ಕಾಫಿಯಾಗುತ್ತಿದ್ದಂತೆ ನಂಜುಂಡಯ್ಯ ಕೇಳಿದರು:

"ನಮ್ಮ ಪಂಚಾಯತ ಬೋರ್ಡು ಅಧ್ಯಕ್ಷರ ಮನೆಗೆ ಹೋಗೋಣ್ವೆ?"

"ಹೋಗೋಣ. ಮೊನ್ನೆ ತಾನೆ ಕೇಳಿದ್ರು— ಹೊಸ್ಮೇಷ್ಟ್ರು ಯಾವಾಗ ಬರ್ತಾರೇಂತ."

ಅಧ್ಯಕ್ಷರೇ ಆ ಊರಿನ ಪ್ರಮುಖರು. ಊರಿನ ಇನ್ನೊಬ್ಬ ಹಿರಿಯ ರೆಂದರೆ ಸಬ್‌ಇನ್ಸ್‌ಪೆಕ್ಟರು. ಹಾಗೆ, ಊರಿನ ಇಬ್ಬರು ಮುಖ್ಯಸ್ಥರಲ್ಲಿ ಒಬ್ಬರನ್ನು ನೋಡಲು ಮೂವರು ಉಪಾಧ್ಯಾಯರೂ ಹೊರಟರು.

...ಮನೆಗೆ ಬರುತ್ತಿದ್ದ ಆ ಮೂವರಿಗೂ ಸ್ವಾಗತ ಬಯಸಿದರು ಅಧ್ಯಕ್ಷ ಶಂಕರಪ್ಪ.

"ಬನ್ನಿ! ಬನ್ನಿ! ದಯಮಾಡ್ಸಿ!"

ಧೋತರದ ಮೇಲೆ ತೆಳುವಾದ ಬನೀನು...ಬಿಳಿಯ ಕೂದಲು ಸೇರಿಕೊಂಡಿದ್ದ ನುಣುಪಾದ ಕ್ರಾಪು. ಗಾತ್ರದ ಮೈ. ನಂಜುಂಡಯ್ಯನವರಷ್ಟೇ ವಯಸ್ಸು. ಮುಖದ ಮೇಲಿನ ನಗೆ ಸಹಜವಾಗಿರಲಿಲ್ಲ.

ರಂಗರಾಯರತ್ತ ನೋಡಿ ಅವರೆಂದರು :

"ಏನು ಇಷ್ಟು ದೂರ ದಯಮಾಡಿಸಿದ್ರಿ ಹೆಡ್ಮೇಷ್ಟ್ರೇ?"

ಜಯದೇವನನ್ನು ನೋಡುತ್ತ ನಂಜುಂಡಯ್ಯನೊಡನೆ ಕೇಳಿದರು:

"ಇವರೇ ನಿಮ್ಮ ಹೊಸ್ಮೇಷ್ಟ್ರೇ?"

"ಹೌದು, ಹೌದು."

"ಸಂತೋಷ...ಸಂತೋಷ...ಯಾವಾಗ ಬರೋಣ್ವಾಯ್ತು ?"

"ನಿನ್ನೇನೇ"

—ಎಂದ ಜಯದೇವ, ವಂದನೆ-ಪ್ರತಿವಂದನೆಯ ಉಪಚಾರವನ್ನು ಮುಗಿಸುತ್ತ.

"ಸ್ಕೂಲು ಚೆನ್ನಾಗಿ ನಡೀತಾ ಇದೆಯೊ ರಂಗರಾಯರೇ?"

"ತಕ್ಕಮಟ್ಟಿಗಿದೆ ಶಂಕರಪ್ಪನವರೇ. ಇನ್ನೇನು, ಹೆಚ್ಚಿಗೆ ಒಬ್ಬರು ಉಪಾಧ್ಯಾಯರು ಬಂದ ಹಾಗಾಯ್ತಲ್ಲ. ನೀವು ಶಿಫಾರಸು ಮಾಡಿ ಒಬ್ಬ ಜವಾನನನ್ನೂ ಕೊಡಿಸಿದರೆ—"

"ಆ ಮೇಲೆ ಇನ್ನೂ ಒಬ್ಬ ಉಪಾಧ್ಯಾಯರು ಬೇಕು ಅಂತೀರೇನೊ?"

"ಮಿಡ್ಲ್‌ಸ್ಕೂಲು ಅಂದ್ಮೇಲೆ ನಾಲ್ಕು ಜನ ಇರ್ಬೇಡ್ವೆ?"

"ಸರಿ, ಸರಿ... ಈ ಖರ್ಚುಗಳೆಲ್ಲಾ ಹ್ಯಾಗಪ್ಪಾ ಸರ್ಕಾರ ನೋಡ್ಕೊಳ್ಳೋದು?"

ತಾವೇ ಸರ್ಕಾರ ಎನ್ನುವಂತೆ ಶಂಕರಪ್ಪ ಮಾತನಾಡುತಿದ್ದರು. ಜಯದೇವ ಅವರ ಬಟ್ಟೆಬರೆಯತ್ತ ದೃಷ್ಟಿ ಹಾಯಿಸಿದ. ಅದು ಖಾದಿಯಾಗಿರಲಿಲ್ಲ...ಸರ್ಕಾರ-ಪಂಚಾಯತ ಬೋರ್ಡು ಎಂದೆಲ್ಲ ಕೇಳುತ್ತಲೇ ರಾಜಕಾರಣದ ವಿಚಾರಗಳು ಜಯದೇವನ ಬಳಿ ನುಸುಳಿದುವು. ನುಸುಳಿ ಹಾಗೆಯೇ ಮರೆಯಾದುವು. ಆ ವಿಷಯದಲ್ಲಿ ಅವನಿಗೆ ಆಸಕ್ತಿ ಇರಲಿಲ್ಲ.

ಆದರೆ ಶಂಕರಪ್ಪ ಆ ಮಾತನ್ನೆ ಪ್ರಸ್ತಾಪಿಸಿದರು.

"ನೀವು ಯಾವ ಪಕ್ಷ ಇವರೆ?"

ಜಯದೇವನನ್ನು ಉದ್ದೇಶಿಸಿ ಆ ಪ್ರಶ್ನೆ ಬಂತು. ಯಾವ ಪಕ್ಷ ಆತ? ಅದೇನೂ ಅವನಿಗೆ ತಿಳಿದಿರಲಿಲ್ಲ. ಆದರೆ ಸದ್ಯಃ 'ನೀವು ಯಾವ ಜಾತಿ?' ಎಂದು ಅವರು ಕೇಳಲಿಲ್ಲವಲ್ಲ! ಅದು ಸಮಾಧಾನದ ವಿಷಯವಾಗಿತ್ತು.

"ನಾನು ಈವರೆಗೆ ಯಾವ ಪಕ್ಷಕ್ಕೂ ಸೇರಿಲ್ಲ."

"ಹೂಂ. ಉಪಾಧ್ಯಾಯರು ಅಂದ್ಮೇಲೆ ನೀವು ಹಾಗೆಲ್ಲ ಸೇರೋ ಹಾಗೂ ಇಲ್ಲಾಂತನ್ನಿ."

ಆ ವಿಷಯ ಜಯದೇವನಿಗೆ ಆವರೆಗೆ ತಿಳಿದಿರಲಿಲ್ಲ. 'ಹಾಗೇನು?' ಎಂದು ಕೇಳಿ ಅಜ್ಞಾನ ಪ್ರದರ್ಶಿಸಬಾರದೆಂದು ಆತ ಸುಮ್ಮನಾದ.

ಆದರೆ ಶಂಕರಪ್ಪ ಸುಮ್ಮನಿರಲಿಲ್ಲ.

ಪ್ರತ್ಯಕ್ಷವಾಗಿ ಯಾವುದೇ ಪಕ್ಷ ಸೇರದೆ ಇದ್ರೂ ಮನಸ್ನಲ್ಲಿ ಒಂದು ಪಕ್ಷ ಅಂತ ಇರೋದಿಲ್ವೆ? ಉದಾಹರಣೆಗೆ ರಂಗರಾಯರ್ನೇ ತಗೊಳ್ಳಿ—"

ರಂಗರಾಯರು ನಡುವೆ ಬಾಯಿ ಹಾಕಿದರು:

"ಏನಾದರೂ ಅನ್ಬಾರದು ಶಂಕರಪ್ಪನವರೇ."

"ಏನಾದರೂ ಯಾಕನ್ನಿ? ಹೋದ ಸಾರೆ ಸಾರ್ವತ್ರಿಕ ಚುನಾವಣೇಲಿ ನಮ್ಮ ಕ್ಷೇತ್ರದಿಂದ ನೀವು ಯಾರ ಪರವಾಗಿ ಕೆಲಸ ಮಾಡಿದ್ರಿ ಅನ್ನೋದು ನಮಗೆ ಗೊತ್ತಿಲ್ವೆ? ಜನಕ್ಕೆ ಗೊತ್ತಿಲ್ವೆ?"

ಆ ಸ್ವರ ಗಡುಸಾಗಿತ್ತು. ರಂಗರಾಯರು ಉಗುಳು ನುಂಗಿ ಸುಮ್ಮನಾದರು ತಮ್ಮ ಮಾತಿನಿಂದಾದ ಪರಿಣಾಮವನ್ನು ಗಮನಿಸಿ ಸಂತುಷ್ಟರಾಗಿ ಶಂಕರಪ್ಪ ಜಯದೇವನತ್ತ ತಿರುಗಿದರು:

"ಬೆಂಗಳೂರಲ್ಲಿ ಎಲ್ಲ ರಾಜಕೀಯ ಪಕ್ಷಗಳೂ ಇದಾವೆ. ನಿಮಗೆ ಯಾರಾದರೂ ಮುಖಂಡರ ಪರಿಚಯ ಉಂಟೇನೋಂತ ಕೇಳ್ದೆ."

"ಇಲ್ಲ, ಇಲ್ಲ. ನನಗೆ ರಾಜಕೀಯದವರ ಪರಿಚಯ ಇಲ್ಲ."

ಶಂಕರಪ್ಪನಿಗೆ ಅತೃಪ್ತಿಯಾಯಿತು.

"ನೀವು ಒಳ್ಳೇ ಅವಕಾಶ ಕಳಕೊಂಡ್ರಿ. ಬೆಂಗಳೂರಲ್ಲೇ ಇದ್ಕೊಂಡು ಹೀಗಾದ್ರೆ—.... ನನ್ನ ಸಲಹೆ ತಗೊಳ್ಳಿ......ಬಹಿರಂಗವಾಗಿ ನೀವು ಯಾವುದೇ ಪಕ್ಷ ಸೇರದೇ ಇದ್ರೂವೆ, ನಿಮ್ಮಷ್ಟಕ್ಕೆ ನೀವು ಎಲ್ಲಾ ವಿಷಯ ತಿಳ್ಕೊಂಡು ತೀರ್ಮಾನಕ್ಕೆ ಬರಬೇಕು..."

ಜಯದೇವ ಮೌನವಾಗಿಯೆ ಇದ್ದು ಹೌದೆಂದು ತಲೆದೂಗಿದ.

ಶಂಕರಪ್ಪನ ಮನೆಯಲ್ಲೂ ಉಪಾಧ್ಯಾಯರಿಗೆ ಕಾಫಿಯಾಯಿತು, ಅದು ಮುಗಿಯುತ್ತ ಆ ಅಧ್ಯಕ್ಷರು ಕೇಳಿದರು :

"ಹೊಸ ಮೇಷ್ಟ್ರ ಊಟ—ವಸತಿ—,...?"

"ಹೋಟ್ಲಲ್ಲಿ ಊಟ ಮಾಡ್ತಾರಂತೆ. ಸದ್ಯಃ ಶಾಲೆಯಲ್ಲೇ ವಸತಿ ಮಾಡ್ಕೊಳ್ಳೀಂತ—"

ಹಾಗೆ ಹೇಳಿದವರು ನಂಜುಂಡಯ್ಯ. ಹೇಳಿದ ಮೇಲೆ ಅವರು ರಂಗರಾಯರತ್ತ ನೋಡಿ ಕೇಳಿದರು :

"ಆಗದೆ ಸಾರ್?"

ನಂಜುಂಡಯ್ಯನೇ ಮುಖ್ಯೋಪಾಧ್ಯಾಯರ ಪಾತ್ರವಹಿಸಿ ಮಾತ ನಾಡಿದ ಹಾಗಿತ್ತು.

"ಓಹೋ... ಆಗದೇನು?"

"ಬರ್ತಾ ಇರಿ ಆಗಾಗ್ಗೆ. ನಮ್ಮನೆಗೆ ಎಲ್ಲಾ ಪೇಪರುಗ್ಳೂ ಬರ್ತವೆ..." ಎಂದರು ಶಂಕರಪ್ಪ, ಉಪಾಧ್ಯಾಯತ್ರಯರನ್ನು ಬೀಳ್ಕೊಡುತ್ತಾ.

............

ರಂಗರಾಯರ ಮನೆಯಲ್ಲಿ ರಾತ್ರೆ ಮಲಗಲೆಂದು ಜಯದೇವ ಸಿದ್ಧತೆ ಮಾಡಿಕೊಳ್ಳುತ್ತಿದ್ದಾಗ, ಮುಖ ಬಾಡಿಸಿಕೊಂಡು ಬೀಸಣಿಕೆಯಿಂದ ಗಾಳಿ ಹಾಕಿಕೊಳ್ಳುತ್ತಿದ್ದ ಆ ಮುಖ್ಯೋಪಾಧ್ಯಾಯರೆಂದರು :

"ನೀವು ನಂಜುಂಡಯ್ಯನ ವಿಶ್ವಾಸ ಗಳಿಸ್ಕೊಂಡ್ರಿ. ನಿಮ್ಮನ್ನ ಅಭಿನಂದಿಸ್ಬೇಕು ಜಯದೇವ."

"ಯಾಕೆ ಹೇಳ್ತೀರಿ ಸಾರ್, ಹಾಗೆ?"

"ಅಲ್ದೆ! ಅದೇನು ಸಾಮಾನ್ಯ ವಿಷಯವೆ? ಸದ್ಯಃ ಶಾಲೆಯಲ್ಲೆ ಮಲಕೊಳ್ಳೀಂತ ನಾನೇ ಹೇಳೋಣಾಂತಿದ್ದೆ. ಆದರೆ ನಂಜುಂಡಯ್ಯನಿಗೆ ಹೆದರಿ ಹೇಳ್ಲಿಲ್ಲ. ಈಗ ನೋಡಿ...!"

ಜಯದೇವನಿಗೆ ವ್ಯಥೆಯಾಯಿತು. ರಂಗರಾಯರೇ ಮಾತು ಮುಂದುವರಿಸಿದರು :

"ನಂಜುಂಡಯ್ಯ ನಿಮಗೆ ಹೇಳಿದ್ರೂ ಹೇಳಿರ್ಬಹುದು. ನನಗೆ

ವರ್ಗವಾಗೋ ಹಾಗಿದೆ. ಆ ಶಂಕರಪ್ಪ ನನ್ಮೇಲೆ ದೂರು ಕೊಟ್ಟು, ಬೆಂಗಳೂರುವರೆಗೂ ಹೋಗಿ ಬಂದು--"

"ಶಂಕರಪ್ಪನವರೇ! ಅವರೂಂತ ನಂಜುಂಡಯ್ಯ ಹೇಳಲಿಲ್ಲ."

"ಅವರೆಲ್ಲಾ ಒಂದೇ ಜಯದೇವ. ಹೋದ ಚುನಾವಣೇಲಿ ನಮ್ಮ ಗುರುತಿನವರು ಒಬ್ಬರಿಗೆ ಸಹಾಯ ಮಾಡ್ದೆ. ಅವರು ಹಿಂದೆ ಕಾಂಗ್ರೆಸಿನಲ್ಲಿದ್ದರೂ ಆ ಸಲ ಸ್ವತಂತ್ರರಾಗಿ ನಿಂತಿದ್ರು. ಶಂಕರಪ್ಪ ಕಾಂಗ್ರೆಸ್ ಭಕ್ತರು. ಸ್ವತಂತ್ರರೇನೋ ಸೋತರೂಂತಿಟ್ಕೊಳ್ಳಿ. ಆದರೂ—"

"ಯಾಕೆ? ಬೇಕಾದವರಿಗೆ ಬೆಂಬಲ ಕೊಡೋ ಹಕ್ಕು ನಮಗಿಲ್ವೆ?"

ಜಯದೇವನ ಪ್ರಶ್ನೆ ಕೇಳಿ, ರಂಗರಾಯರು ನಕ್ಕರು.

"ಹಕ್ಕು? ಅದೆಲ್ಲಾ ಇರೋದು ರಾಜ್ಯಾಂಗದಲ್ಲಿ! ನಿಮಗಿನ್ನೂ ತಿಳೀದು ಜಯದೇವ."

"ಚುನಾವಣೇಲಿ ನೀವು ಕಾಂಗ್ರೆಸ್ ವಿರೋಧಿಯಾಗಿದ್ರೀಂತ ದೂರು ಕೊಟ್ರೆ?"

"ಹಾಗೆ ಕೊಡೋದಕ್ಕಾಗುತ್ಯೆ? ಬೇರೆ ಆರೋಪ ಸೃಷ್ಟನೆಮಾಡಿದರು."

"ಬೇಜಾರು..."

"ಈಗಲೇ ಬೇಜಾರು ಅಂದರೆ ಹೇಗೆ ಜಯದೇವ? ಸ್ವಲ್ಪ ದಿವಸ ಕಳೀಲಿ—ನಿಮಗೇ ಗೊತ್ತಾಗುತ್ತೆ."

# ೭

ಮೂರನೆಯ ತರಗತಿ ಜಯದೇವನ ತಲೆನೋವಿಗೆ ಕಾರಣವಾಯಿತು. ಕರಿ ಹಲಗೆಯ ಮೇಲೆ ಯಾರೋ ಆತನ ವ್ಯಂಗ್ಯಚಿತ್ರ ಬರೆದಿದ್ದರು. ಜಯದೇವ ಮುಗುಳ್ನಗುತ್ತಲೆ ಅದನ್ನು ಒರೆಸಿದ.

"ಚಿತ್ರ ಚೆನ್ನಾಗಿದೆ. ಇದನ್ನು ಬರೆದ ಕಲಾವಿದ ಯಾರು ?" ಎಂದು ಹುಡುಗರನ್ನೆಲ್ಲ ಸೂಕ್ಷ್ಮವಾಗಿ ನೋಡುತ್ತ ಪ್ರಶ್ನಿಸಿದ. ಉತ್ತರ ಬರಲಿಲ್ಲ.

"ಯಾರ್ರೀ ಮಾನಿಟರ್ ಈ ತರಗತಿಗೆ?"

ಆ ಪ್ರಶ್ನೆಗೆ ಉತ್ತರವಾಗಿ ಬಲು ಕಿರಿಯವನಾದ ಶ್ರೀನಿವಾಸಮೂರ್ತಿ ಎದ್ದು ನಿಂತ. ಭಯಲಜ್ಜೆಗಳು ಆವನ ಮುಖವನ್ನು ಮುಸುಕಿದ್ದುವು.

"ಚಿತ್ರಕಾರರ ಪರಿಚಯ ಮಾಡ್ಕೊಟ್ಟರಾಗ್ದೆ?"

ಜಯದೇವ ಇಷ್ಟಪಡದೇ ಇದ್ದರೂ ವ್ಯಂಗ್ಯಮಿಶ್ರಿತವಾಗಿ ಹೊರಬಿತ್ತು ಧ್ವನಿ.

ಹುಡುಗ ಗಳಗಳನೆ ಅತ್ತುಬಿಟ್ಟ. ಅವನದೊಂದೇ ಹಾಡು:

"ನನಗೆ ಮಾನಿಟರ್ ಕೆಲಸ ಬೇಡಿ ಸಾರ್, ಬೇಡಿ ಸಾರ್."

ಜಯದೇವನಿಗೆ ಅರ್ಥವಾಗಲಿಲ್ಲ. ಯಾಕೆ—ಏನು—ಎಂದು ಆತ ಮತ್ತೆ ಮತ್ತೆ ಕೇಳಿದ. ಬಂದ ಉತ್ತರ ಒಂದೇ:

"ನನಗೆ ಈ ಕೆಲಸ ಬೇಡಿ ಸಾರ್."

ವ್ಯಂಗ್ಯ ಚಿತ್ರದ ವಿಷಯ ಜಯದೇವನಿಗೆ ಮರೆತೇ ಹೋಯಿತು. ಈ ಹಿರೇಮಣಿಯ ಅಳು ಪ್ರಕರಣ, ಅವನ ಮನಸ್ಸಿನ ನೆಮ್ಮದಿಯನ್ನು ಕೆಡಿಸಿತು. ಪಾಠ ತಡವಾಗುತ್ತಿದೆಯೆಂದು ಆತ ಚಡಪಡಿಸಿದ.

"ಯಾಕೋ ? ಯಾಕಪ್ಪ ?"

ಉತ್ತರ—ಯಾವ ನಿರ್ಬಂಧವೂ ಇಲ್ಲದೆ ಹರಿಯುತಿದ್ದ ಕಣ್ಣೀರು.

"ಯಾರು ನಿನ್ನ ಚುನಾಯಿಸಿದ್ದು?"

"ಹೆಡ್ಮೇಷ್ಟ್ರು ಇದ್ದಾಗ್ಲೇ ಚುನಾಯ್ಸಿದ್ದು ಸಾರ್."

"ಸರಿ ಹಾಗಾದರೆ, ಹೆಡ್ಮೇಷ್ಟ್ರಿಗೆ ಹೇಳ್ತೀನಿ."

"ಹೂಂ....ಸಾರ್....ನನಗಿಂತ ದೊಡ್ಡ ಹುಡುಗರನ್ನೇ ಮಾನಿಟರ್ ಮಾಡ್ಬೇಕು ಸಾರ್."

ಜಯದೇವನಿಗೀಗ ವಿಷಯ ಸ್ಪಷ್ಟವಾಯಿತು. ವ್ಯಂಗ್ಯ ಚಿತ್ರ ಬರೆದ ವರ ತಂಡ, ಈ ಹಿರೇಮಣಿಗಿಂತ ಹಿರಿಯದಾಗಿತ್ತೆನ್ನುವುದರಲ್ಲಿ ಸಂದೇಹ ವಿರಲಿಲ್ಲ.

"ನಿನ್ನ ಮಾತು ಯಾರೂ ಕೇಳೊಲ್ವೆ ಶ್ರೀನಿವಾಸಮೂರ್ತಿ ?"

"ಇಲ್ಲ ಸಾರ್."

"ಹುಂ. ಆಗಲಿ. ಆ ಮೇಲೆ ನೋಡೋಣ."

ಪಾಠವೇನೋ ನಡೆಯಿತು. ಆದರೆ ಜಯದೇವನಿಂದ ಮನಸ್ಸಿಟ್ಟು ಪಾಠ ಹೇಳುವುದಾಗಲಿಲ್ಲ. ವಿದ್ಯಾರ್ಥಿಗಳೂ ನೆಟ್ಟ ಮನಸ್ಸಿನಿಂದ ಕಿವಿ ಗೊಡಲಿಲ್ಲ.

ಆ ತರಗತಿ ಮುಗಿಸಿಕೊಂಡು ದುಗುಡ ತುಂಬಿದ ಹೃದಯದಿಂದಲೆ ಜಯದೇವ ಆಫೀಸು ಕೊಠಡಿಗೆ ಬಂದ.

"ಮೂರನೇ ತರಗತೀದ್ದು ಏನಾದ್ರು ಮಾಡ್ಬೇಕು ಸಾರ್" ಎಂದ ಆತ ಮುಖ್ಯೋಪಾಧ್ಯಾಯರೊಡನೆ.

"ಏನು ಸಮಾಚಾರ ?"

"ಆ ಮಾನಿಟರ್ ವಿಷಯ. ಹುಡುಗ ಅಳ್ತಾನೆ. ದೊಡ್ಡ ಹುಡುಗರು ಅವನ ಮಾತು ಕೇಳೋಲ್ವಂತೆ."

"ನನಗೆ ಗೊತ್ತಿತ್ತು....ಏನ್ಮಾಡೋಣ, ಹೇಳಿ ?"

ರಂಗರಾಯರ ಅಸಹಾಯತೆಯ ಸ್ವರದಿಂದ ಜಯದೇವನಿಗೆ ಆಶ್ಚರ್ಯ ವಾಯಿತು.

"ಯಾಕ್ಸಾರ್ ? ಗಲಾಟೆ ಮಾಡೋ ಹುಡುಗರು ಯಾರೂಂತ ನೋಡಿ."

"ಆ ತಂಡದ ಮುಖ್ಯಸ್ಥ ದೊಡ್ಡ ಹುಡುಗ ಯಾರು ಗೊತ್ತೆ? ನಮ್ಮ ಪೋಲಿಸ್ ಅಧಿಕಾರಿಯ ಮಗ. ನಿಮಗೆ ಇಲ್ಲಿಂದ ವರ್ಗವಾಗ್ಬೇಕೂಂತ ಅಪೇಕ್ಷೆ ಇದ್ದರೆ ಧಾರಾಳವಾಗಿ ಆ ಹುಡುಗನ ತಂಟೆಗೆ ಹೋಗಿ. ನನ್ನ ಕೇಳಿದರೆ, ಸುಮ್ನಿದ್ಬಿಡೋದೇ ಮೇಲು."

ಜಯದೇವ ಬೆರಗಾಗಿ ತೆರೆದ ಬಾಯಿ–ಕಣ್ಣು ಕ್ಷಣಕಾಲ ಹಾಗೆಯೇ ಇದ್ದುವು.

"ಹೋದ ವರ್ಷ ಆ ಹುಡುಗನಿಗೆ ಬುದ್ಧಿ ಕಲಿಸೋಕೆ ಪ್ರಯತ್ನಪಟ್ಟು. ಅವನ ತಂದೆಯ ಕೃಪಾಕಟಾಕ್ಷಕ್ಕೆ ನಾನು ಪಾತ್ರನಾದೆ. ಈ ವರ್ಷ ನಿಮ್ಮ ಸರದಿಯೇನೊ?"

"ಹುಡುಗ ಕೆಟ್ಟು ಹೋಗ್ತಿದಾನೇಂತ ಅವನ ತಂದೆಗೆ ಗೊತ್ತಾಗಲ್ವೆ?"

"ಅವರು ಹಾಗೇಂತ ನಂಬೋದೇ ಇಲ್ಲ. ಅವರ ದೃಷ್ಟೀಲಿ ಈ ಮಹಾ ಪ್ರಚಂಡ ಸುಕುಮಾರ-ಸುಪುತ್ರ!"

ಜಯದೇವ ಸುಮ್ಮನಾದ. ರಂಗರಾಯರೂ ಸ್ವಲ್ಪ ಹೊತ್ತು ಮೌನ ವಾಗಿದ್ದು ಕೇಳಿದರು:

"ಮಾನಿಟರ್ ಶ್ರೀನಿವಾಸಮೂರ್ತಿ ಏನಂತಾನೆ ?"

"ತನಗಿಂತ ದೊಡ್ಡವರ್ನ ಮಾನಿಟರ್ ಮಾಡಿ ಅಂತಾನೆ."

"ನಾಳೆ ಪಾಠಕ್ಕೆ ಹೋದಾಗ ನೀವು ಹಾಗೇ ಮಾಡಿ ಜಯದೇವ. ಆ ಪೋಲಿಸ್ ಅಧಿಕಾರಿ ಮಗನನ್ನೇ ಮಾನಿಟರ್ ಮಾಡಿ. ಸಾಯಂಕಾಲ ಕ್ಲಾಸಿಗೆ ಹೋದಾಗ, ಹೊಸ ಮಾನಿಟರ್ ನೇಮಕ ನಾಳೆ ನೀವು ಮಾಡ್ತೀರೀಂತ ಹೇಳ್ತೀನಿ."

"ಹುಡುಗ್ರೇ ಚುನಾಯ್ಸೋದು ಬೇಡ್ವೆ?"

"ಚುನಾವಣೆ ಮಾತು ಎಲ್ಬಂತು ಜಯದೇವ!"

ನಂಜುಂಡಯ್ಯ ಒಳಬಂದರು. ಕೆಂಪಡರಿದ್ದ ಜಯದೇವನ ಮುಖ ಕ್ಷೋಭೆಯನ್ನು ತೋರುತಿತ್ತು.

"ಏನು ವಿಶೇಷ?" ಎಂದು ಕೇಳಿದರು ನಂಜುಂಡಯ್ಯ, ಸಿಗರೇಟು ಹಚ್ಚುತ್ತಾ.

ನಡೆದುದನ್ನು ಮತ್ತೊಮ್ಮೆ ಅವರೆದುರು ಹೇಳಿದ್ದಾಯಿತು. ನಂಜುಂಡಯ್ಯ ಏಕಪ್ರಕಾರವಾದ ಸ್ವರದಲ್ಲಿ ನುಡಿದರು :

"ಅದನ್ನೆಲ್ಲ ಮನಸ್ಸಿಗೆ ಹಚ್ಕೋಬೇಡಿ ಜಯದೇವ. ಆ ಚಿಕ್ಕ ಹುಡುಗ ಶ್ರೀನಿವಾಸಮೂರ್ತೀನ ಮಾನಿಟರ್ ಮಾಡಿದ್ದೇ ಸರಿಯಲ್ಲ. ಈಗಾದರೂ ಏನಂತೆ, ರಘುನಾಥನನ್ನೇ-ಅದೇ ಆ ಪೋಲೀಸ್ ಹುಡುಗ-ಮಾನಿಟರ್ ಮಾಡಿದರಾಯಿತು. ಹಾಗೆ ಜವಾಬ್ದಾರಿ ಕೊಟ್ಟರೆ ಅವನ ನಡತೇನೂ ಸುಧಾರಿಸ್ಬಹುದು."

ಆ ಮಾತು ಪೂರ್ತಿಯಾಗುತ್ತಲಿದ್ದಂತೆ ರಂಗರಾಯರು ಹೊರ ಹೋದರು.

"ನಾನು ಹೇಳಿದ್ದು ಸರಿಯಲ್ಲ ಅಂತೀರಾ?" ಎಂದು ನಂಜುಂಡಯ್ಯ ಜಯದೇವನನ್ನೇ ದಿಟ್ಟಿಸುತ್ತಾ ಅಂದರು.

ಜಯದೇವ ಅಲ್ಲವೆನ್ನುವ ಹಾಗಿರಲಿಲ್ಲ. ಹಾಗೆ ಹೇಳಲು, ವಾದಿಸಲು ಆತ ಇಷ್ಟಪಡಲಿಲ್ಲ. ಆ ಅನುಭವದ ಮೇಲೆ ತೆರೆಯನ್ನು ಇಳಿಬಿಟ್ಟು ಬೇರೇನನ್ನಾದರೂ ಯೋಚಿಸಲು ಆತ ಯತ್ನಿಸಿದ.

...........

ಶಾಲೆಯಲ್ಲಿ ವಸತಿ... ಹೋಟೆಲಿನಲ್ಲಿ ಊಟ.

ನಾಲ್ಕನೆಯ ತರಗತಿಯಿದ್ದ ಕೊಠಡಿಯಲ್ಲಿ ಎರಡು ಬೆಂಚುಗಳನ್ನು ಜೋಡಿಸಿ, ಹಾಸಿಗೆ ಹಾಸಿ, ಕಿಟಕಿ ತೆರೆದಿಟ್ಟು, ಆ ರಾತ್ರೆ ಜಯದೇವ ಮಲಗಿದ. ಹೊರಗಿನಿಂದ ಬೀಸುತ್ತಿದ್ದ ತಣ್ಣನೆಯ ಗಾಳಿ ಆಹ್ಲಾದಕರ ವಾಗಿತ್ತು. ಜಗತ್ತು ನಿದ್ದೆಹೋಗತೊಡಗಿದ್ದಾಗ ಆ ಪ್ರಶಾಂತತೆಯಲ್ಲಿ ಗರಿಗೆದರಿಕೊಂಡು ನೆನಪಿನ ಹಕ್ಕಿಗಳು ದೂರದೂರಕ್ಕೆ ಸಂಚಾರ ಮಾಡಿದುವು.

... ತಾನೇ ವಿದ್ಯಾಭ್ಯಾಸ ಕಲಿತ ಕಾನಕಾನಹಳ್ಳಿಯ ಶಾಲೆ. ಅಲ್ಲಿ ಉಪಾಧ್ಯಾಯರ ಮೆಚ್ಚುಗೆಗೆ ತಾನು ಪಾತ್ರನಾದುದು. ಆ ಬಳಿಕ ಬೆಂಗಳೂರು. ಅಲ್ಲಿ ತಾನು ಅಡುಗೆಯವನಾಗಿದ್ದ ಮನೆಯಲ್ಲಿ ಓದಲು ದೀಪವಿಲ್ಲದೆ ಪಟ್ಟ ಸಂಕಟಗಳು...

ಹೊಸತಾಗಿ ಕೊಂಡು ತಂದಿದ್ದ ಬೆಡ್‌ಲ್ಯಾಂಪಿನತ್ತ ಕೈಚಾಚಿ ಜಯ ದೇವ ಬತ್ತಿಯನ್ನು ಕಿರಿದು-ಬಲು ಕಿರಿದುಗೊಳಿಸಿದ.... ಇದು ತನ್ನದೇ ಆದ ದೀಪ. ಈ ತಿಂಗಳಾದ ಬಳಿಕ ದೊರೆಯುವ ನಾಲ್ವತ್ತು ರೂಪಾಯಿ ಸಂಬಳದ ನಿರೀಕ್ಷೆಯಿಂದ ಕೊಂಡುತಂದ ದೀಪ... ಕಿರಿದುಗೊಳಿಸಿದ್ದ ದೀಪ ವನ್ನು ಸುಮ್ಮನೆ ಜಯದೇವ ಒಮ್ಮೆಲೆ ದೊಡ್ಡದು ಮಾಡಿದ-ಸಣ್ಣದು ದೊಡ್ಡದು-ಮತ್ತೆ ಸಣ್ಣದು...

ಅದೊಂದು ಸಂಜೆ ವೇಣುವಿನ ಬರುವಿಕೆಯನ್ನು ಇದಿರುನೋಡುತ್ತ ಆತನ ಕೊಠಡಿಯಲ್ಲಿ ಏನನ್ನೋ ಓದುತ್ತ ಜಯದೇವ ಕುಳಿತಿದ್ದ. ಅದು, ಅದೇ ಆಗ ಹೊಸತಾಗಿ ಬಂದಿದ್ದ ಕನ್ನಡ ಕಾದಂಬರಿ. ಬಲು ಸೊಗಸಾಗಿತ್ತು. ಓದುವುದರಲ್ಲೇ ತಲ್ಲೀನನಾಗಿದ್ದ ಜಯದೇವನಿಗೆ ಕತ್ತಲಾದುದು, ದೃಷ್ಟಿ

ಮಸುಕಾದುದು, ಗೊತ್ತಾಗಲೇ ಇಲ್ಲ. ಒಮ್ಮೆಲೆ ದೀಪ ಹತ್ತಿಕೊಂಡಿತು. ಸುನಂಧಾ ವಿದ್ಯುತ್ ಗುಂಡಿಯ ಬಳಿ ನಿಂತಿದ್ದಳು. ಜಯದೇವ ತಲೆಯೆತ್ತಿ ಆಕೆಯನ್ನು ನೋಡಿ ಮುಗುಳ್ನಕ್ಕ.

"ಥ್ಯಾಂಕ್ಸ್."

ಮತ್ತೆ ಓದುವುದರಲ್ಲೇ ಆತ ತಲ್ಲೀನನಾದ.

ಟಿಕ್-ದೀಪ ಆರಿತು. ತಲೆಯೆತ್ತಿ ನೋಡಿದ ಜಯದೇವ.

"ಯಾಕೆ ಸುನಂದಾ ?"

ಟಿಕ್-ದೀಪಹತ್ತಿಕೊಂಡಿತು. ಕುಲುಕುಲು ನಗುತ್ತಿದ್ದಳು ಸುನಂದಾ, ತುಂಟ ಹುಡುಗಿಯಹಾಗೆ. ಎಣ್ಣೆಯ ದೀಪವಾಗಿದ್ದರೆ ಮೆಲ್ಲನೆ ಸಣ್ಣದು ದೊಡ್ಡದು ಮಾಡುತಿದ್ದಳೇನೊ!...

"ಎಷ್ಟೊತ್ತು ಓದೋದು ಜಯಣ್ಣಾ? ಬೇಜಾರು ನಂಗೆ. ಏನಾದರೂ ಮಾತಾಡ್ಬಾರ್ದಾ?"

"ಈ ಕಾದಂಬರಿ ಚೆನ್ನಾಗಿದೆ ಅಲ್ವಾ? "

"ನಾನು ಓದಿಲ್ಲ. ಆದರ ಕತೆ ಹೇಳು... ಓದಿದಷ್ಟು ಹೇಳು. ಪ್ಲೀಸ್-"

ಜಯದೇವ ಕತೆ ಹೇಳಲಿಲ್ಲ. ಸುನಂದಾ ಪುಸ್ತಕ ಓದಿಲ್ಲವೆಂದರೆ ಯಾರು ನಂಬುತಿದ್ದರು? ಮನೆಗೆ ಯಾವ ಪುಸ್ತಕ ಬಂದರೂ ಮೊದಲು ಓದುವವಳು ಆಕೆಯೇ.

...ನಿದ್ದೆ ಹೋಗುವ ಹೊತ್ತಿಗೆ ಕತೆ. ಈ ರೀತಿ ಯಾರೂ ಜಯದೇವ ನಿಗೆ ಕತೆ ಹೇಳಿರಲಿಲ್ಲ. ಅಜ್ಜಿಯ ಬಾಯಿಂದ ರಾಜಕುಮಾರ ರಾಜ ಕುಮಾರಿಯ ಕತೆ ಕೇಳುವ ಭಾಗ್ಯವಿರಲಿಲ್ಲ ಆತನಿಗೆ...ಆದರೂ ಆತ ಪುಸ್ತಕ ಗಳನ್ನು ಓದುತ್ತಿದ್ದ-ಕೈಗೆ ಸಿಕ್ಕಿದ್ದನ್ನೆಲ್ಲ.

ಆದರೆ, ಸುನಂದಾ ಜತೆಯಲ್ಲಿ ಆತ ಸರಿಜೋಡಿಯಾಗುವನೋ ಇಲ್ಲವೋ. ಆಕೆ ಎಷ್ಟೊಂದು ಓದಿದ್ದಳು-ಎಷ್ಟೊಂದು!

ಸುನಂದ—ಸುಂದರಿ...

ಪಕ್ಕಕ್ಕೆ ಹೊರಳಿ, ಕಣ್ಣುಮುಚ್ಚಿ ಕಣ್ಣುತೆರೆದು, ನಿದ್ದೆಹೋಗಲು ಯತ್ನಿಸಿದ ಜಯದೇವ. ಯಾರನ್ನೋ-ಯಾರನ್ನು?-ಸ್ಮರಿಸಿ ತುಟಿಗಳು ಮುಗುಳ್ನಗುತ್ತಲೇ ಇದ್ದುವು...ಹಾರಿ ಹೋಗಿದ್ದ ಹಕ್ಕಿಗಳೆಲ್ಲ ಸದ್ದಿಲ್ಲದೆ ಸಾಲಾಗಿ ಬಂದು ಮತ್ತೆ ನೆನಪಿನ ಗೂಡು ಸೇರಿಕೊಂಡುವು.

ನಿದ್ದೆ ಮೋಹಿನಿಯಾಗಿ ಬಲೆಬೀಸಿ ಜಯದೇವನನ್ನು ಬಿಗಿದು ಕಟ್ಟಿದಳು.

.....................

ಮಾರನೆಯ ದಿನ ಜಯದೇವ, ಮೂರನೆಯ ತರಗತಿಯಲ್ಲಿ,ತನಗೊಪ್ಪಿಗೆ ಯಾಗದೇ ಇದ್ದರೂ ಅನಿವಾರ್ಯವೆಂದು, ಶ್ರೀನಿವಾಸಮೂರ್ತಿಯ ಬದಲು ರಘುನಾಥನನ್ನು ಹಿರೇಮಣಿಯಾಗಿ ನೇಮಿಸಿದ. ಎಷ್ಟೋ ಜನ ಹುಡುಗರಿಗೆ ಇದು ಒಪ್ಪಿಗೆಯಾಗದೇ ಹೋದರೂ ಯಾರೂ ವಿರೋಧಿಸಲಿಲ್ಲ.

ಮುಖ್ಯೋಪಾಧ್ಯಾಯರ ಸೂಚನೆಯಂತೆ ನಾಲ್ಕನೆಯ ತರಗತಿಗೂ ಜಯದೇವನೇ ಕನ್ನಡ ಪಾಠ ಹೇಳಿದ. ಅದೇನೂ ಆತನಿಗೆ ಕಷ್ಟದ್ದಾಗಿ ತೋರಲಿಲ್ಲ. ಪಠ್ಯ ಪುಸ್ತಕದಲ್ಲಿ ಯಾವುದೇ ಪಾಠ ನೀರಸವಾಗಿದ್ದರೂ, ಜಯ ದೇವ ಅದನ್ನೆತ್ತಿಕೊಂಡು ಯೋಚಿಸುತ್ತ ತನ್ನ ಬುದ್ಧಿಮತ್ತೆಯ ಒರೆಗಲ್ಲಿಗೆ ತೀಡಿದಾಗ, ಆ ಪಾಠದಲ್ಲೂ ಸ್ವಾರಸ್ಯ ಕಂಡುಬರುತ್ತಿತ್ತು. ಕೊನೆಯ ತರಗ ತಿಯಲ್ಲಿದ್ದ ವಿದ್ಯಾರ್ಥಿಗಳ ಸಂಖ್ಯೆ ಹದಿನೆಂಟು. ಅವರಲ್ಲಿ ಹಿಂದಿನವರ್ಷ ಉತ್ತೀರ್ಣರಾಗದೆ ಉಳಿದವರೂ ಕೆಲವರಿದ್ದರು. ಆ ಹುಡುಗ ಹುಡುಗಿಯ ರಿಗೆಲ್ಲ ಶಾಲೆಗೆ ಹೋಗುವುದು ದಿನನಿತ್ಯದ ಅನಿವಾರ್ಯ ಸಂಕಟವೇನೂ ಆಗಿರಲಿಲ್ಲ. ಹುಡುಗತನದ ಮೆರಗು ಇದ್ದರೂ ಅವರಲ್ಲೊಂದು ರೀತಿಯ ಜವಾಬ್ದಾರಿಯಿತ್ತು. ಎಷ್ಟೆಂದರೂ ಐದ್ಮೈದು ರೂಪಾಯಿನ ಪರೀಕ್ಷೆಗಾಗಿ ಸಿದ್ಧತೆ ಮಾಡಿಕೊಳ್ಳುತ್ತಿದ್ದವರು ! ಆ ಬಳಗದಲ್ಲಿ ಹಲವರಿಗೆ ಪಾಠಗಳಲ್ಲಿ ಒಳ್ಳೆಯ ಆಸಕ್ತಿಯಿತ್ತು. ಪುಸ್ತಕದಲ್ಲಿದ್ದುದಕ್ಕಿಂತಲೂ ಹೆಚ್ಚನ್ನು ತಿಳಿದು ಕೊಳ್ಳಲು ಅವರು ಯತ್ನಿಸುತ್ತಿದ್ದರು.

ಒಂದುದಿನ ಪಾಠಹೇಳಲೆಂದು "ಆದರ್ಶ ಮಹಿಳಾ ರತ್ನಗಳು" ಪುಸ್ತಕವನ್ನೆತ್ತಿಕೊಂಡಾಗ, ಹೇಗೆ ಮುಂದುವರಿಯಬೇಕೆಂಬುದು ಸ್ಪಷ್ಟ ವಾಗದೆ, ಜಯದೇವ ನಾಲ್ಕು ನಿಮಿಷ ಪುಸ್ತಕದ ಪುಟಗಳನ್ನು ತಿರುವುತ್ತ ಕುಳಿತ....ವೀರಮಾತೆ ವಿಮಲಾ, ದೇವಿ ಜೋನ್, ಜೀಜಾಬಾಯಿ, ಫ್ಲಾರೆನ್ಸ ನೈಟಿಂಗೇಲ್, ಕಸ್ತೂರಿ ಬಾ, ಒಬ್ಬರೇ ಇಬ್ಬರೇ ? ಪುಸ್ತಕದಲ್ಲಿ ಕೆಲವು ಭಾವ ಚಿತ್ರಗಳಿದ್ದುವು. ಆದರೆ ಬರಿಯ ಭಾವಚಿತ್ರಗಳಿಂದಲೇ ದಿವ್ಯಜೀವ ಗಳ ಪೂರ್ಣದರ್ಶನ ಸಾಧ್ಯವಿತ್ತೆ? ಅಲ್ಲಿ ಅಚ್ಚಾಗಿದ್ದ ಜೀವನ ಚರಿತ್ರೆಗಳೂ ಅಷ್ಟೇ. ಬಿಳಿಯ ಹಾಳೆಯಮೇಲೆ ಕರಿಯ ಅಕ್ಷರಗಳು ಅಚ್ಚೊತ್ತಿಕೊಂಡು.

ಚಲಿಸದೆ ಅಲ್ಲೇ ನಿಂತಿದ್ದುವು. ಜಯದೇವ ಚಲಿಸುವ ವ್ಯಕ್ತಿಗಳನ್ನು ಬಯಸಿದ. ಅಳಿದವರನ್ನು ಜೀವಂತಗೊಳಿಸಲೆತ್ನಿಸಿದ... ಮೆಲ್ಲ ಮೆಲ್ಲನೆ ಪುಸ್ತಕದ ಪುಟಗಳಿಂದ ಆ ವೀರಮಾತೆಯರೆದ್ದು ಜಯದೇವನ ಕಣ್ಣೆದುರು ನಿಂತರು. ಅವರನ್ನು ಕಾಣುತ್ತ ಜಯದೇವ ಮುಗುಳ್ನಕ್ಕ. ಅದು ದಿವ್ಯದರ್ಶನ... ತಾನು ಕಂಡುದನ್ನು ಹಾಗೆಯೇ ವಿದ್ಯಾರ್ಥಿಗಳಿಗೂ ತಿಳಿಸಿಕೊಡುವ ಬಯಕೆ ಅವನಿಗಾಯಿತು.

'ಈ ಯತ್ನದಲ್ಲಿ ಯಶ ದೊರೆಯಲಿ, ನನಗೆ ಯಶ ದೊರೆಯಲಿ' ಎಂದು ಮನಸ್ಸಿನಲ್ಲೇ ಆತ ಧ್ಯಾನಿಸಿಕೊಂಡ.

"ಷುರು ಮಾಡೋಣವ್ವೋ ಪಾಠ ?"

ಇಷ್ಟರ ತನಕ ಉಪಾಧ್ಯಾಯರೇಕೆ ಮೌನವಾಗಿದ್ದರೆಂಬುದನ್ನೇ ತಿಳಿಯದಿದ್ದ ಹುಡುಗರಲ್ಲಿ ಹಲವರೆಂದರು:

"ಹೂಂ ಸಾರ್."

"ಮೊದಲ್ನೇ ಪಾಠ ನಾನು ಓದ್ಲೇ ಸಾರ್ ?" ಎಂದನೊಬ್ಬ ಹುಡುಗ, ಹಾಗೆ ಓದಿ ಅಭ್ಯಾಸವಿದ್ದವನು.

"ಬೇಡ. ಇವತ್ತು ಮೊದಲನೇ ಪಾಠ ಷುರು ಮಾಡೋಕ್ಮುಂಚೆ ಕೆಲವು ವಿಷಯಗಳ್ನ ಹೇಳ್ತೀನಿ. ನಾನು ಮಾತಾಡ್ತಾ ಹೋದ ಹಾಗೆ ಟಿಪ್ಪಣಿ ಮಾಡೋಕೆ ಬರುತ್ತೊ ?"

ಅಂತಹ ಅಭ್ಯಾಸವಿರಲಿಲ್ಲ ಹುಡುಗರಿಗೆ. ತಾನು ಕಲಿಸುವ ಪದ್ಧತಿ ಈ ಮಟ್ಟಕ್ಕೆ ಹೇಳಿದ್ದಲ್ಲವೆನಿಸಿತು ಜಯದೇವನಿಗೆ. ಕ್ಷಣಾರ್ಧದಲ್ಲಿ ಹೇಳಲು ಅಪೇಕ್ಷಿಸಿದ್ದ ವಿಷಯಗಳನ್ನೆಲ್ಲ ಮರೆಯಾಗಿ, ಹೊಸ ಸರಳರೀತಿಯಲ್ಲಿ ಆ ವಿಷಯಗಳೇ ಮತ್ತೆ ರೂಪುಗೊಂಡವು.

"ಪರವಾಗಿಲ್ಲ, ನಾನು ಹೇಳೋದನ್ನ ಮನಸ್ಸು ಕೊಟ್ಟು ಕೇಳಿ."

ಕುಳಿತಲ್ಲಿಂದೆದ್ದು ನಿಲ್ಲುತ್ತಾ ಜಯದೇವ ತನ್ನ ವಿದ್ಯಾರ್ಥಿಗಳಲ್ಲಿ ಪ್ರತಿಯೊಬ್ಬರನ್ನೂ ಸೂಕ್ಷ್ಮವಾಗಿ ಗಮನಿಸಿದ. ಕೇಳಲು ತವಕಗೊಂಡು ಆತುರ ವ್ಯಕ್ತಪಡಿಸುತ್ತ ಅವನನ್ನೇ ಎಷ್ಟೊಂದು ಕಣ್ಣುಗಳು ದಿಟ್ಟಿಸುತ್ತಿದ್ದುವು! ಆ ದೃಷ್ಟಿಗಳಿಂದೆಲ್ಲ ಸ್ಫೂರ್ತಿ ಪಡೆಯುತ್ತ ಜಯದೇವ ಆರಂಭಿಸಿದ...

ಅದೊಂದು ಸೊಗಸಾದ ಕಥನ ಭಾಷಣ. "ಆದರ್ಶಮಹಿಳಾರತ್ನಗಳು" ಪುಸ್ತಕಕ್ಕೆ ಮುನ್ನುಡಿ. ಆತನ ಮಾತುಗಳು, ಜಗತ್ತಿನ ಮಾತೆಯರೆಲ್ಲರ

ಹಿರಿತನವನ್ನು ಎತ್ತಿ ತೋರಿಸಿದುವು. ಮಾತೃಪ್ರೇಮದ ಅನುಭವ ಆತನಿಗಿರಲಿಲ್ಲ ನಿಜ, ಆದರೆ ಮಾತೆ ದೈವೀ ಸ್ವರೂಪಳೆಂದು ಸಹಸ್ರಸಾರೆ ಆತ ಕೇಳಿದ್ದನಲ್ಲವೆ ?

ಆದರ್ಶ ಮಹಿಳಾರತ್ನಗಳು....

ತನ್ನ ತರಗತಿಯಲ್ಲಿ, ತನ್ನನ್ನೇ ಬೆರಗುಗಣ್ಣುಗಳಿಂದ ನೋಡುತ್ತಿದ್ದ ವಿದ್ಯಾರ್ಥಿನಿಯರನ್ನೇ ಎಷ್ಟೋ ಬಾರಿ ದಿಟ್ಟಿಸಿ ಜಯದೇವ ಮಾತನಾಡಿದ.

"ನಮ್ಮದು ಪುಣ್ಯ ಭೂಮಿ. ಈ ತಾಯಿಯ ಬಸಿರಲ್ಲಿ ಒಳ್ಳೆಯ ಮಾನವರು ಹಲವರು ಜನಿಸಿದ್ದಾರೆ. ಆದರ್ಶಮಹಿಳಾರತ್ನಗಳೂ ನಮ್ಮ ಬದುಕನ್ನು ಬೆಳಗಿವೆ. ಹುಟ್ಟಿದವರೆಲ್ಲ ಮಹಾತೇಜಸ್ವಿಗಳಾಗೋದಿಲ್ಲ. ಅಥವಾ ಮಹಾತೇಜಸ್ವಿಗಳಾಗಿಯೇ ಯಾರೂ ಹುಟ್ಟೋದಿಲ್ಲ. ಎಲ್ಲರಲ್ಲೂ ಒಳ್ಳೆಯ ಗುಣಗಳಿರುತ್ತವೆ. ಕೆಲವರಲ್ಲಿ ಹೆಚ್ಚು, ಕೆಲವರಲ್ಲಿ ಕಡಿಮೆ. ಹೆಚ್ಚು ಗುಣಗಳಿರುವವರು ಆದರ್ಶವ್ಯಕ್ತಿಗಳಾಗ್ತಾರೆ. ಜೀಜಾಬಾಯಿಯಂತಹ ವೀರಮಾತೆ ಆದರ್ಶ ಸ್ತ್ರೀರತ್ನ-ನಮ್ಮಲ್ಲೇ ಹುಟ್ಟಿ ಬರಲಾರಳೆಂದು ಹೇಗೆ ಹೇಳೋಣ ? ಖಂಡಿತ ಹುಟ್ಟಬಹುದು ..."

ನಡುನಡುವೆ ತಾನೆ ಮಾತನಾಡುತ್ತಿರುವೆನೆ ಎಂದು ಜಯದೇವನಿಗೆ ಸಂದೇಹವಾಗುತಿತ್ತು. ಹಿಂದೆ ತಾನೆಲ್ಲೋ ಕೇಳಿದ್ದ ಎಲ್ಲೋ ಓದಿದ್ದ ಮಾತುಗಳೇ ತನ್ನ ನಾಲಿಗೆಯಿಂದ ಹೊರಬೀಳುತಿದ್ದಂತೆ ತೋರಿತು. ಮಾತನಾಡುತ್ತಲಿದ್ದಂತೆಯೇ ಮನಸ್ಸಿನಲ್ಲೇ ಆತ ಅಂದುಕೊಂಡ :

"ಇದೆಲ್ಲಾ ನನ್ನ ಸ್ವಂತದ ವಿಚಾರಗಳಲ್ಲದೇ ಇರಬಹುದು. ಆದರೆ ಇವು ಒಳ್ಳೆಯ ವಿಚಾರಗಳು. ಇಷ್ಟುಮಾತ್ರ ನಿಜ."

ಪಾಠದ ಅವಧಿ ಮುಗಿಯಿತೆಂದು ಘಂಟೆ ಬಾರಿಸಿತು. ಜಯದೇವನೂ ತನ್ನ ಕಥನ-ಭಾಷಣದ ಕೊನೆಯನ್ನು ತಲಪಿದ್ದ. ಮಂತ್ರಮುಗ್ಧರಾಗಿ ಕುಳಿತಿದ್ದರು ಆ ಹುಡುಗ-ಹುಡುಗಿಯರೆಲ್ಲ.

"ಇವತ್ತಿಗಿಷ್ಟು. ಇನ್ನೊಂದು ದಿವಸ ವೀರಮಾತೆ ವಿಮಲಾ ಆರಂಭಿಸೋಣ."

ಸ್ವಾರಸ್ಯವಾದುದು ಸವಿಯಾದುದು ಇಷ್ಟಕ್ಕೇ ನಿಂತು ಹೋಯಿತಲಾ ಎಂದು ವಿದ್ಯಾರ್ಥಿಗಳು ಚಡಪಡಿಸಿದರು. ಅವರಲ್ಲಿ ಹೆಚ್ಚು ಕಡಿಮೆ ಎಲ್ಲರ

ಪ್ರೀತಿ ಗೌರವಗಳನ್ನೂ ಸೂರೆಗೊಂಡು ಜಯದೇವ ತರಗತಿಯಿಂದ ಹೊರ ಹೋದ.

ನಾಲ್ಕನೆಯ ತರಗತಿಯಲ್ಲಿ ಯಾವ ಪಾಠ ಮಾಡಿದಿರೆಂದು ರಂಗ ರಾಯರು ಕೇಳಲಿಲ್ಲ. ಪಾಠ ನಡೆಯುತ್ತಿದ್ದಾಗ ಅವರು ಒಂದೆರಡು ಸಾರೆ ಜಗಲಿಯಲ್ಲಿ ಅತ್ತಿಂದಿತ್ತ ಹಾದು ಹೋಗಿದ್ದರು. ಆದರ್ಶ ಮಹಿಳೆಯರನ್ನು ಕುರಿತು ಮಾತನಾಡುವುದರಲ್ಲಿ ತಲ್ಲೀನನಾಗಿದ್ದ ಜಯದೇವನಿಗೆ ಅದು ಗೋಚರವಾಗಿರಲಿಲ್ಲ. ಹುಡುಗರು ಸೂತ್ರದ ಬೊಂಬೆಯ ಹಾಗೆ ಕುಳಿತು ಜಯದೇವನ ಮಾತುಗಳಿಗೆ ಕಿವಿ ಕೊಡುತ್ತಿದ್ದುದನ್ನು ಕಂಡು ರಂಗರಾಯರಿಗೆ ಸಮಾಧಾನವೆನಿಸಿತ್ತು. ಜಯದೇವನ ದಕ್ಷತೆಯ ಬಗೆಗೆ ಅವರಿಗೆ ಸಂದೇಹ ವಿರಲಿಲ್ಲ. ಆತ ಯಶಸ್ವಿಯಾದ ಉಪಾಧ್ಯಾಯನಾಗುವುದು ಖಂಡಿತವಾಗಿತ್ತು.

ನಂಜುಂಡಯ್ಯ ಆ ಪ್ರಶ್ನೆ ಕೇಳಿದರು. ಯುವಕ ಜಯದೇವ ಸಮ ರ್ಥನಾದ ಉಪಾಧ್ಯಾಯನಾಗುವನೆಂಬ ವಿಷಯದಲ್ಲಿ ಅವರಿಗೂ ಸಂಶಯ ವಿರಲಿಲ್ಲ. ಆದರೆ ಯಾವ ಪಾಠ ಮಾಡಿದಿರೆಂದು ಕೇಳುವುದು ತಮ್ಮ ಕರ್ತವ್ಯ ವೆಂದು ಅವರು ಭಾವಿಸಿದರು. ತೀರ ಹೊಸಬನಾದ ಉಪಾಧ್ಯಾಯ ಬಂದಿ ರುವಾಗ ಹಳಬರಾದವರು ಅವನ ನೆರವಿಗೆ ಬರುವುದು ಕರ್ತವ್ಯವಲ್ಲದೆ ಇನ್ನೇನು ?

ಮುಖ್ಯೋಪಾಧ್ಯಾಯರೇ ಸ್ವತಃ ಏನೂ ಕೇಳದೆ ಇದ್ದುದನ್ನು ಕಂಡು ನಂಜುಂಡಯ್ಯ ಸ್ವಲ್ಪಹೊತ್ತು ಸುಮ್ಮನಿರಬೇಕಾಯಿತು. ಇಬ್ಬರೇ ಉಳಿ ದಾಗ ಅವರೆಂದರು :

"ನಾಲ್ಕನೇ ತರಗತಿ ಹುಡುಗರು ಹೇಗಿದಾರೆ ?"

"ಮೂರನೇ ತರಗತಿಗಿಂತ ಎಷ್ಟೋ ವಾಸಿ. ಜವಾಬ್ದಾರಿ ಇರೋ ಹುಡುಗರು."

"ಹೋದ ವರ್ಷ ಸರಿಯಾಗಿ ತೀಡಿದ್ದೆ ಅವರ್ನ."

ನಾಲ್ಕನೆಯ ತರಗತಿ ಹುಡುಗರು ಒಳ್ಳೆಯವರಾಗಿ ತೋರಿದರೆ ಅದಕ್ಕೆ ಕಾರಣ ತಾನು—ಎಂಬ ಅಂತರಾರ್ಥವಿತ್ತು ನಂಜುಂಡಯ್ಯನ ಮಾತಿನಲ್ಲಿ.

"ತುಂಬಾ ಆಸಕ್ತಿಯಿಂದ ಕಿವಿಗೊಟ್ಟು ಕೂತರು."

ಆದರೆ ನಂಜುಂಡಯ್ಯನ ಅನುಭವ ಹಾಗಿರಲಿಲ್ಲ. ಅವರು ಪಾಠ ವನ್ನು–ಅದರಲ್ಲೂ ಇಂಗ್ಲಿಷ್ ಪಾಠವನ್ನು–ಚೆನ್ನಾಗಿಯೇ ಮಾಡುತಿದ್ದರೂ

ಹುಡುಗರು ವಿಶೇಷ ಆಸಕ್ತಿಯನ್ನೇನೂ ತೋರುತ್ತಿರಲಿಲ್ಲ. ಜಯದೇವ ಹುಡುಗರ ನಡುವೆ ತಮಗಿಂತ ಹೆಚ್ಚು ಜನಪ್ರಿಯನಾಗುವನೆಂಬುದು ಸ್ಪಷ್ಟ ವಾಗಿತ್ತು. ಅದನ್ನು ಅವರು ಸಹಿಸಿಕೊಂಡರು.

"ಯಾವ ಪಾಠ ಮಾಡಿದಿರಿ ?"

"ಆದರ್ಶ ಮಹಿಳಾರತ್ನಗಳು."

"ಮೊದಲನೇ ಪಾಠ ಪೂರ್ತಿ ಮಾಡಿದ್ರೇನೊ ?"

"ಇಲ್ಲ. ಪಾಠ ಇನ್ನೂ ಷುರು ಮಾಡಿಲ್ಲ."

"ಮತ್ತೆ !"

"ಮುಂದಿನ ಪಾಠಕ್ಕೆ ಪೀಠಿಕೆ ಅಂತ ಸಾಮಾನ್ಯ ವಿವರಣೆ ಕೊಟ್ಟೆ."

"ಲೆಕ್ಚರು ಅನ್ನಿ !"

"ಒಂದು ರೀತೀಲಿ ಹಾಗೆಯೇ."

"ಆದರಿಂದೆಲ್ಲಾ ಏನು ಪ್ರಯೋಜನ ಇವರೆ ?"

"ಯಾಕ್ಸಾರ್ ? ಹೇಳೋದು ಸ್ವಾರಸ್ಯವಾಗಿದ್ರೆ ಹುಡುಗರು ಕೇಳ್ತಾರೆ."

ಇತರ ಉಪಾಧ್ಯಾಯರಿಗೆ ಸ್ವಾರಸ್ಯಪೂರ್ಣವಾಗಿ ಹೇಳಲು ಬರುವುದಿಲ್ಲ ವೆಂಬುದನ್ನು ಜಯದೇವ ಸೂಚ್ಯವಾಗಿ ತಿಳಿಸಿದ ಹಾಗಾಯಿತೆಂದು ನಂಜುಂ ಡಯ್ಯ ಭಾವಿಸಿದರು.

ಅವರ ಹುಬ್ಬು ಗಂಟಿಕ್ಕಿತು. ಸಿಗರೇಟನ್ನು ತುಟಿಗಳ ನಡುವೆ ಸಿಕ್ಕಿಸಿ ಕೊಂಡು ಅವರು ಕಡ್ಡಿಗೀರಿದರು.

"ಕೇಳದೆ ಏನು ? ಒಂದು ಕಿವಿಯಿಂದ ಕೇಳಿ ಇನ್ನೊಂದು ಕಿವಿಯಿಂದ ಹೊರಕ್ಬಿಡ್ತಾರೆ."

"ಅಷ್ಟೇ ಅಂತೀರಾ?"

"ಅಷ್ಟೆ ಇನ್ನೇನು? ನನ್ನ ಕೇಳಿದರೆ, ಆಚರಣೆಯಲ್ಲಿರೋ ಪದ್ಧತೀನೇ ನೀವು ಅನುಸರಿಸಿದ್ರೆ ಮೇಲು."

"ಪಾಠ ಹೇಳ್ಕೊಡೋ ವಿಷಯ ಮಾತಾಡ್ತಿದೀರಾ ?" —ಎಂದು ಕೇಳುತ್ತಲೆ ರಂಗರಾಯರು ಒಳ ಬಂದರು.

ಮುಖ ಸಪ್ಪಗೆ ಮಾಡಿಕೊಂಡು ಜಯದೇವ ಹೇಳಿದ :

"ಹೌದು ಸಾರ್."

ವಿಷಯವೇನೆಂಬುದನ್ನು ಸೂಕ್ಷ್ಮವಾಗಿಯೆ ಊಹಿಸಿಕೊಂಡ ರಂಗರಾಯರೆಂದರು :

"ಈಗಿನ ವಿದ್ಯಾಭ್ಯಾಸ ಪದ್ಧತೀನೇ ಸರಿಯಾಗಿಲ್ಲ ಅಂತ ನಾವು ಅಂತೀವಿ. ಆ ಮಾತು ನಾವು ಪಾಠ ಹೇಳಿಕೊಡೋ ರೀತಿಗೂ ಅನ್ವಯಿಸುತ್ತೆ. ಎಷ್ಟೋ ಬದಲಾವಣೆ ಆಗ್ಬೇಕಪ್ಪ. ಅದು ಮಾತ್ರ ಖಂಡಿತ. ಪಾಠ ಮಾಡೋ ರೀತೀಲೂ ನಾವು ಹೊಸ ಹೊಸ ಪ್ರಯೋಗ ಮಾಡಿ ನೋಡ್ಬೇಕು. ಇದು ನನ್ನ ಅಭಿಪ್ರಾಯ."

ಆ ಪ್ರೋತ್ಸಾಹದ ಮಾತಿಗಾಗಿ ತಾನು ಚಿರಕೃತಜ್ಞ ಎನ್ನುವ ನೋಟದಿಂದ ಜಯದೇವ ಮುಖ್ಯೋಪಾಧ್ಯಾಯರನ್ನು ನೋಡಿದ.

ಆದರೆ ನಂಜುಂಡಯ್ಯ ಅಷ್ಟು ಸುಲಭವಾಗಿ ಸೋಲನ್ನೊಪ್ಪಿಕೊಳ್ಳುವಂತಿರಲಿಲ್ಲ.

"ಹಾಗಾದರೆ ಇಷ್ಟೊಂದು ವರ್ಷ ಪ್ರಯೋಗ ಮಾಡಿದ್ರಲ್ಲಾ ಸಾರ್, ಏನಾಯ್ತು? ರಿಟೈರಾಗೋ ಸಮಯ —"

"ನಿಜ ನಂಜುಂಡಯ್ಯ. ಪ್ರಯೋಗ ಮಾಡಿ ಏನೂ ಆಗಲಿಲ್ಲ. ನಾನು ರಿಟೈರಾಗೋ ಸಮಯವೂ ಬಂತು. ಆದರೂ ಬಿಟ್ಬಿಡಬಾರ್ದಪ್ಪ. ಕೊನೇವರೆಗೂ ಪ್ರಯೋಗ ಮಾಡ್ತಾನೇ ಇರ್ಬೇಕು."

ನೋವು ತುಂಬಿತ್ತು ಆ ಧ್ವನಿಯಲ್ಲಿ.

ಜಯದೇವ ವ್ಯಥೆಯಿಂದ ನಿಟ್ಟುಸಿರು ಬಿಟ್ಟ.

# ೮

ಕೊನೆಯವರೆಗೂ ಪ್ರಯೋಗ ಮಾಡಲು ಹೊರಟ ರಂಗರಾಯರು ಆ ಮೇಲೆ ಆ ಊರಲ್ಲಿದ್ದುದು ಎರಡು ತಿಂಗಳ ಕಾಲ ಮಾತ್ರ.

ಆ ಅವಧಿಯಲ್ಲಿ ಸಾಕು ಸಾಕೆನಿಸುವಷ್ಟು ಮಳೆ ಸುರಿಯಿತು. ಆ ಪುಟ್ಟ ಊರಿನ ರಸ್ತೆಗಳು ನದಿಗಳಾದುವು. ಮರದ ಕೊಂಬೆಯೊಂದು ಗಾಳಿಗೆ ಮುರಿದು ಶಾಲೆಯ ಛಾವಣಿಯ ಮೂಲೆಗೆ ಬಿದ್ದು ಕೆಲವು ಹೆಂಚು ಗಳು ಒಡೆದು ಚೂರಾದುವು. ಸುತ್ತುಮುತ್ತಲಿನ ಪ್ರದೇಶವೆಲ್ಲ ಜಲಮಯ ವಾಯಿತು.

ಆಗ ಶಾಲೆಯಲ್ಲಿ ಪಾಠವಾಗುತ್ತಿರಲಿಲ್ಲವೆಂದರೂ ಸರಿಯೆ. ತರಗತಿ ಗಳಿಗೆ ಬರುತಿದ್ದ ಹುಡುಗರಿಗಿಂತಲೂ ಬರದೇ ಇದ್ದವರ ಸಂಖ್ಯೆಯೇ ಹೆಚ್ಚು. ಅದಕ್ಕೆ ಹಲವು ಕಾರಣಗಳಿದ್ದುವು. ಹಳ್ಳಿಗಳಿಂದ ನಡೆದು ಬರುತಿದ್ದ ಹುಡುಗರು ಆ ಮಳೆಯಲ್ಲಿ ಸುರಕ್ಷಿತವಾಗಿ ಹಿಂತಿರುಗುವರೆಂಬ ಭರವಸೆ ಇರಲಿಲ್ಲ. ಅದಕ್ಕಿಂತಲೂ ಹೆಚ್ಚಾಗಿ ಎಷ್ಟೋ ವಿದ್ಯಾರ್ಥಿಗಳು ತಮ್ಮ ಹಿರಿಯರಿಗೆ ಕೃಷಿ ಕೆಲಸದಲ್ಲಿ ಮನೆಗೆಲಸವಲ್ಲಿ ನೆರವಾಗಬೇಕಾಗುತಿತ್ತು. ಛತ್ರಿ ಹಿಡಿದು ಶಾಲೆಗೆ ಬರುತ್ತಿದ್ದವರ ಸಂಖ್ಯೆ ಎಷ್ಟೊಂದು ಕಡಮೆ! ಕೆಲವು ದಿನ ಬಿಟ್ಟು ಆ ಮೇಲೆ ಬಂದವರನ್ನು ಗದರಿಸುವುದು ಅವಶ್ಯವಾಗಿತ್ತು. ಆದರೆ ಹಾಗೆ ಗದರಿಸುವುದು ತನ್ನಿಂದಂತೂ ಆಗದ ಕೆಲಸವೆಂದು ಜಯದೇವ ಮನಗಂಡ.

ಅಂತಹ ಒಂದು ಮಳೆ ಮಧ್ಯಾಹ್ನ. ನಡು ಎತ್ತರದ, ವಯಸ್ಸಾಗಿ ದ್ದರೂ ಹೃಷ್ಟಪುಷ್ಟರಾಗಿದ್ದ, ಒಬ್ಬರು ಹಾಸಿಗೆ ಟ್ರಂಕುಗಳೊಡನೆ ಬಂದಿಳಿದರು. ಆ ಮುಖದ ಮೇಲೆ ನಗುವಿರಲಿಲ್ಲ. ಆ ಕಣ್ಣುಗಳಲ್ಲಾ ದರೋ ಸಂಶಯ ಮನೆಮಾಡಿತ್ತು. ಮಾತು, ಆಡಿದರೆ ಮುತ್ತು ಸುರಿಯು ವುದೇನೋ ಎನ್ನುವ ಹಾಗೆ—'ಹಾಂ' 'ಹೂಂ' 'ಐ ಸೀ.'

ಆತ ಬಂದಿಳಿದಾಗ, ಹೊಸ ಇನ್ಸ್‌ಪೆಕ್ಟರಿರಬಹುದೇನೋ—ಎಂದು ರಂಗರಾಯರು ಕೂಡಿಸಿ ಕಳೆದರು. ನಂಜುಂಡಯ್ಯ, ಶಂಕರಪ್ಪನ ಅರ್ಜಿಯ ವಿಚಾರಣೆಗೆ ಯಾರಾದರೂ ಬಂದಿರಬಹುದೆ—ಎಂದು ಯೋಚಿಸಿದರು.

ಜಯದೇವನಿಗೆ ಏನೂ ಹೊಳೆಯಲಿಲ್ಲ. ಆದರೂ ಗಭೀರವಾದುದೇನೊ ಇದೆ ಎಂದು ಅವನ ಮನಸ್ಸು ಮಿಡುಕಿತು.

ಆಫೀಸು ಕೊಠಡಿಯತ್ತ ಹೋಗುತಿದ್ದ ನಂಜುಂಡಯ್ಯ ಅಲ್ಲೆ ತಡೆದು ನಿಂತು ಬಂದವರನ್ನು ಇದಿರ್ಗೊಂಡರು.

ಮೊದಲು ಮಾತನಾಡಿದವರು ಆ ವ್ಯಕ್ತಿಯೇ.

"ಇಲ್ಲಿ ಎಚ್. ಎಂ. ರಂಗರಾಯರು ಯಾರು?"

ರಂಗರಾಯರೇ ಅಷ್ಟರಲ್ಲಿ ಅಲ್ಲಿಗೆ ಬಂದರು.

"ಬನ್ನಿ, ನಾನು...ಬನ್ನಿ, ಬೇರೆ ಊರಿಂದ ಬಂದ ಹಾಗಿದೆ."

ಬಂದವರು ಮಾತನಾಡಲಿಲ್ಲ. ಮೂವರು ಉಪಾಧ್ಯಾಯರೊಡನೆ ಅವರು ಕೊಠಡಿಯೊಳಕ್ಕೆ ಹೋಗಿ ಕುಳಿತರು: ಬಂದ ಹೊಸಬರನ್ನು ನೋಡಲು ಬಾಗಿಲಬಳಿ ಹುಡುಗರು ಗುಂಪುಕೂಡದೇ ಇರಲಿಲ್ಲ. ಬಂದವರು ಹುಡುಗರತ್ತ ವ್ಯಗ್ರ ದೃಷ್ಟಿಯನ್ನು ಬೀರಿ ಹುಬ್ಬು ಗಂಟಿಕ್ಕಿದರು—'ಇದು ಶಿಷ್ಟ ಸಂಪ್ರದಾಯವಲ್ಲ'ವೆಂಬಂತೆ.

ರಂಗರಾಯರು ಹುಡುಗರನ್ನು "ಆಚೆಗೆ ಹೋಗಿ!" ಎಂದು ಬೆದರಿಸ ಬೇಕಾಯಿತು.

ಬಂದವರು ಹೇಳಿದರು :

"ನಿಮಗೆ ನನ್ನ ಪರಿಚಯವಿಲ್ಲ."

ಅದು ಸ್ಪಷ್ಟವಾಗಿತ್ತು. ಹಾಗೆಂದು ತಿಳಿಯಪಡಿಸುವ ಅವಶ್ಯಕತೆಯೂ ಇದ್ದಂತೆ ಜಯದೇವನಿಗೆ ತೋರಲಿಲ್ಲ. ನಂಜುಂಡಯ್ಯ ಮೌನವಾಗಿಯೇ ಇದ್ದರು. ಸಿಗರೇಟನ್ನು ಹೊರತೆಗೆಯಲಿಲ್ಲ ಮಾತ್ರ.

"ನಿಜ. ಪರಿಚಯವಿಲ್ಲ" ಎಂದರು ರಂಗರಾಯರು, ಮುಗುಳ್ನಗಲು ಯತ್ನಿಸುತ್ತಾ.

"ನನ್ನ ಹೆಸರು ವೆಂಕಟರಾವ್" ಎಂದರು ಹೊಸಬರು. ವೆಂಕಟರಾವ್ ಯಾರೆಂಬುದನ್ನು ವಿವರಿಸಲಿಲ್ಲ. ಅವರು ತಮ್ಮ ಉಣ್ಣೆಯ ಕೋಟಿನ ಒಳ ಜೇಬಿಗೆ ಕೈ ಹಾಕಿ ಉದ್ದನೆಯ ಲಕ್ಕೋಟೆಯೊಂದನ್ನು ಹೊರತೆಗೆದರು. ಫೂ ಎಂದು ಊದಿ ಲಕ್ಕೋಟೆಯ ಬಾಯಗಲಿಸಿ ಗುಂಡು ಸೂಜಿ ಚುಚ್ಚಿದ್ದ ಎರಡು ಹಾಳೆಗಳನ್ನು ಬೆರಳುಗಳಿಂದೆತ್ತಿ ರಂಗರಾಯರಿಗೆ ಕೊಟ್ಟರು.

ಚಾಮರಾಜನಗರದ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾದ ಎನ್. ವೆಂಕಟರಾಯರನ್ನು ಆ ಊರಿನ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿ ವರ್ಗಾಯಿಸಲಾಗಿತ್ತು. ತಕ್ಷಣವೇ ಹೊರಟು ರಂಗರಾಯರನ್ನು 'ರಿಲೀವ್' ಮಾಡಬೇಕೆಂಬ ಸೂಚನೆಯಿತ್ತು ಅದರಲ್ಲಿ. ಇನ್ನೊಂದು ಹಾಳೆ ರಂಗರಾಯರನ್ನು ಸಂಬೋಧಿಸಿದ್ದ ವರ್ಗದ ಆಜ್ಞೆಯ ಪ್ರತಿ. ಮುನ್ನೂರು ಮೈಲುಗಳಾಚೆ ಕೊಡಗನೂರಿಗೆ ಸಾಮಾನ್ಯ ಉಪಾಧ್ಯಾಯರಾಗಿ ಅವರನ್ನು ಎತ್ತಿ ಹಾಕಿದ್ದರು.

ಹೃದಯ ಹಿಸುಕಿದಂತಾಗಿ ನೋವಿನ ಕ್ರೋಧದ ಭಾವನೆಗಳು ಮುಖದತ್ತ ಧಾವಿಸಿದರೂ ನಿರ್ವಿಕಾರ ಚಿತ್ತದ ಮುಖವಾಡ ಧರಿಸಲೆತ್ನಿಸುತ್ತಾ ಬಿಮ್ಮನೆ ತುಟಿ ಬಿಗಿದುಕೊಂಡು ರಂಗರಾಯರು ಮತ್ತೊಮ್ಮೆ ಎರಡೂ ಆಜ್ಞೆಗಳನ್ನೋದಿದರು. ಓದಿದ ಬಳಿಕ ಹಾಳೆಗಳನ್ನು ನಂಜುಂಡಯ್ಯನಿಗೆ ಕೊಟ್ಟರು. ಅವರ ಪಕ್ಕದಲ್ಲೇ ಕುಳಿತಿದ್ದ ಜಯದೇವನೂ ಅದನ್ನೋದಿದ. ನಂಜುಂಡಯ್ಯನಿಗೆ ತೃಪ್ತಿಯಾಯಿತು, ಅತೃಪ್ತಿಯಾಯಿತು. ತೃಪ್ತಿ—ಶಂಕರಪ್ಪನ ಪ್ರಭಾವ ಪರಿಣಾಮಕಾರಿಯಾಯಿತೆಂದು; ಅತೃಪ್ತಿ—ಮುಖ್ಯೋಪಾಧ್ಯಾಯನಾಗುವ ತಮ್ಮ ಬಯಕೆ ಫಲಿಸಲಿಲ್ಲವೆಂದು. ಆದರೂ ಅವರು ಮುಗುಳ್ನಗಲೂ ಇಲ್ಲ; ಅಸಮಾಧಾನವನ್ನು ತೋರಿಸಲೂ ಇಲ್ಲ. ಜಯದೇವನಿಗೆ ಮಾತ್ರ ಈ ಪರಿಸ್ಥಿತಿ ಕ್ರೂರವಾಗಿ ವಿಚಿತ್ರವಾಗಿ ತೋರಿತು.

ನಂಜುಂಡಯ್ಯ ಆ ಹಾಳೆಗಳನ್ನು ಮೇಜಿನ ಮೇಲಿಡುತಿದ್ದಂತೆ ರಂಗರಾಯರೆಂದರು :

"ನನಗಿನ್ನೂ ಅನುಜ್ಞೆ ಬಂದಿಲ್ಲ."

ತಾವು ತಂದ ಆಜ್ಞಾಪತ್ರದ ಪ್ರಭಾವವನ್ನು ತೂಗಿನೋಡಲು ಅಪೇಕ್ಷಿಸಿ, ಮೂವರನ್ನೂ ನೆಟ್ಟದೃಷ್ಟಿಯಿಂದಲೇ ನೋಡುತಿದ್ದ ವೆಂಕಟರಾಯರು ವ್ಯಕ್ತಪಡಿಸಿದ ಪ್ರತಿಕ್ರಿಯೆಯೊಂದೇ:

"ಐ ಸೀ."

"ಬೇರೆ ಜಿಲ್ಲೆಯಿಂದ್ಲೇ ನೀವು ಬಂದಹಾಗಾಯ್ತು."

"ಹೂಂ."

"ಸಂಸ್ಥಾನದ ವಿದ್ಯಾಧಿಕಾರಿಯ ಕಚೇರಿಯಿಂದ್ಲೇ ಆಜ್ಞೆ ಹೊರಟಿದೆ."

"ಹೌದು. ವಿಷಯವೇ ಅಂಥಾದ್ದು."

"ಓಹೊ! ವಿಷಯ ತಮಗೂ ಗೊತ್ತಿದೆ ಹಾಗಾದರೆ."

"ಹೋದ ಬೇಸಗೇಲಿ ಬೆಂಗಳೂರಿಗೆ ಹೋಗಿದ್ದೆ. ಅಲ್ಲಿ ತಿಳೀತು."

"ಜಿಲ್ಲಾ ವಿದ್ಯಾಧಿಕಾರಿಯೂ ಸಹಿ ಮಾಡಿದಾರೆ, ಅಲ್ವೆ?"

"ಹೂಂ."

ಮತ್ತೆ ಮೌನ ನೆಲೆಸಿತು.

"ಚಾರ್ಜ್ ಯಾವತ್ತು ತಗೋತೀರ?" ಎಂದು ರಂಗರಾಯರು ಕೇಳಿದರು.

"ಈ ಕ್ಷಣವೇ ತಗೋಳೋಣ ಅಂತಿದ್ರೂ ನಿಮಗೆ ಇನ್ನೂ ಆಜ್ಞೆಯೇ ಬಂದಿಲ್ವಲ್ಲಾ!"

"ಪರವಾಗಿಲ್ಲ. ಪೋಸ್ಟಿನಲ್ಲಿ ಇವತ್ತೇನೋ ಬಂದಿಲ್ಲ: ಆದರೆ ನಾಳೆ ಬರಬಹುದು."

ಒಮ್ಮೆಲೆ ಒಂದು ವಿಚಾರ ರಂಗರಾಯರಿಗೆ ಹೊಳೆಯಿತು. ವರ್ಗದ ವಿಷಯ ಮುಂಚಿತವಾಗಿ ತನಗೆ ತಿಳಿಯಬಾರದೆಂದೇ ಆಜ್ಞಾಪತ್ರವನ್ನು ಬೇಗನೆ ಕಳುಹಿಸದೆ ಇರಬಹುದೆ? ಹಾಗೂ ಇರಬಹುದೆ?

ವೆಂಕಟರಾಯರು ಮಾತ್ರ ಹಾಗೆ ಆ ಕ್ಷಣವೆ ಚಾರ್ಜ್ ವಹಿಸಿ ಕೊಳ್ಳಲು ಸಿದ್ಧರಿರಲಿಲ್ಲ.

"ಅದು ಹ್ಯಾಗೆ ಸಾಧ್ಯ? ನಿಮಗೂ ಆಜ್ಞೆ ಬರೋವರೆಗೆ ಕಾದಿರ್ತೀನಿ."

ರಂಗರಾಯರೆದ್ದು ಕಿಟಕಿಯ ಬಳಿ ನಿಂತು ಸ್ವಲ್ಪ ಹೊತ್ತು ಶೂನ್ಯ ನೋಟ ಬೀರಿದರು. ಅದೇ ಆಗ ನಿಂತಿದ್ದ ಮಳೆ ಮತ್ತೆ ಬರುವ ಸೂಚನೆ ಗಳಿದ್ದುವು. ಬೆಳಗು ಮುಂಜಾವವೊ ಮುಚ್ಚಂಜೆಯೊ ಎಂದು ಸಂದೇಹ ಬರುವ ಹಾಗೆ ಮೋಡ ದಟ್ಟನೆ ಕವಿದು ಬೆಳಕು ಮಾಯವಾಗಿತ್ತು.

ಅದು ಅಸಹನೀಯವಾದ ಮೌನ. ಸಿಗರೇಟನ್ನಾದರೂ ನಂಜುಂಡಯ್ಯ ಸೇದಬಾರದೆ–ಎಂದುಕೊಂಡ ಜಯದೇವ. ಅವರು ಯಾಕೋ ಸಿಗರೇಟನ್ನು ಹೊರತೆಗೆಯಲೇ ಇಲ್ಲ. ದೃಷ್ಟಿಯನ್ನು ಕಿರಿದುಗೊಳಿಸಿ ಹೊಸ ಮುಖ್ಯೋ ಪಾಧ್ಯಾಯರನ್ನು ಪರೀಕ್ಷಿಸುತ್ತ ಜಯದೇವ ಕುಳಿತ.

ರಂಗರಾಯರು ಮತ್ತೆ ವೆಂಕಟರಾಯರತ್ತ ಮುಖ ತಿರುಗಿಸಿ ಹೇಳಿದರು:

"ಕ್ಷಮಿಸಿ. ನಿಮಗೆ ನಿಮ್ಮ ಸಹೋದ್ಯೋಗಿಗಳ ಪರಿಚಯ ನಾನು ಮಾಡಿಕೊಡಲೇ ಇಲ್ಲ."

ನಂಜುಂಡಯ್ಯ ಮತ್ತು ಜಯದೇವನತ್ತ ನೋಡುತ್ತ, ರಾಯಭಾರಿಗಳನ್ನು ಸ್ವೀಕರಿಸುವ ರಾಷ್ಟ್ರಾಧಿಪನ ಹಾಗೆ ವೆಂಕಟರಾಯರು ತುಟಿಗಳ ಕೊನೆಯಿಂದಲೆ ಮುಗುಳ್ನಕ್ಕರು.

ಔಪಚಾರಿಕವಾದ ವಂದನೆ–ಮರುವಂದನೆಗಳಾದುವು.

"ಬನ್ನಿ, ಸ್ನಾನ–ಊಟ ಮಾಡ್ಕೊಂಡು ಬರೋಣ" ಎಂದು ರಂಗರಾಯರು ಹೊಸಬರನ್ನು ಕರೆದರು.

"ನೀವು ಯಾವಾಗಲೂ ಇಷ್ಟು ಹೊತ್ತಿಗೆ ಊಟಕ್ಕೆ ಹೋಗ್ತೀರೇನು?"

ಆ ಪ್ರಶ್ನೆಯಲ್ಲಿ ಆಶ್ಚರ್ಯವಿರಲಿಲ್ಲ, ಅಣಕವಿತ್ತು. ಆಳವಾದ ಅರ್ಥವಿತ್ತು. ಶಾಲೆಯ ಕೆಲಸದ ನಡುವೆ ಊಟಕ್ಕೆ ಹೋಗುವುದು ಜವಾಬ್ದಾರಿಯ ವರ್ತನೆಯಲ್ಲವೆಂಬ ಧ್ವನಿಯಿತ್ತು.

ರಂಗರಾಯರಿಗೆ ಅದು ಹೊಳೆಯದೆ ಹೋಗಲಿಲ್ಲ. ಆದರೂ ಅದನ್ನು ಗಮನಿಸದೆ ಅಂದರು:

"ಹೌದು, ನಿಮ್ಮ ಊಟ ಇನ್ನೂ ಆಗಿಲ್ಲ ಅಲ್ವೆ? ಬನ್ನಿ, ಹೋಗ್ಬಿಟ್ಟು ಬರೋಣ."

"ಇಲ್ಲ. ನೀವು ಹೋಗಿ. ನಾನು ಇಲ್ಲೇ ಎಲ್ಲಾದರೂ ಹೋಟೆಲಿನಲ್ಲಿ ಮುಗಿಸ್ಕೊಂಡು ಬರ್ತೀನಿ."

ಈ ಒರಟುತನ ಜಯದೇವನಿಗೆ ಅರ್ಥವಾಗಲಿಲ್ಲ. ಆ ವರ್ತನೆಯ ಸೂಚ್ಯಾರ್ಥ ರಂಗರಾಯರಿಗೆ ಹೊಳೆದು ಅವರು ನೊಂದುಕೊಂಡರು.

"ಉಪಾಧ್ಯಾಯರ ಜಾತಿಯಿಂದ ನನಗೇನೂ ಬಹಿಷ್ಕಾರಹಾಕಿಲ್ಲ ತಾನೆ? ನನ್ಮನೇಲಿ ಊಟಮಾಡ್ಕೂಡ್ದು ಅಂತ ಮೇಲಿನವರು—"

"ಹೆ—ಹ್ಹೆ!" ಎಂದು ವೆಂಕಟರಾಯರು ನಕ್ಕರು. ರಂಗರಾಯರ ಮಾತು ಅವರ ಮೇಲೆ ಯಾವ ಪರಿಣಾಮವನ್ನೂ ಮಾಡಿದಂತೆ ತೋರಲಿಲ್ಲ.

"ಬನ್ನಿ ಹಾಗಾದರೆ."

"ಬೇಡಿ! ನಾನು ಆಗ್ಲೇ ತೀರ್ಮಾನಿಸಿ ಬಿಟ್ಟಿದ್ದೀನಿ. ಊಟ ಹೋಟೆಲಲ್ಲೇ."

ನಂಜುಂಡಯ್ಯನಿಗೆ ಈ ನಿರಾಕರಣೆ ಮೆಚ್ಚುಗೆಯಾಯಿತು.

"ಇರಲಿ ರಂಗರಾವ್. ಇವರ್ನ ಆನಂದವಿಲಾಸಕ್ಕೆ ಕರಕೊಂಡು ಹೋಗ್ತೀನಿ. ನೀವು ಹೋಗ್ಬನ್ನಿ" ಎಂದು ಅವರು ಹೇಳಿದರು.

ತಮಗಷ್ಟೇ ಕೇಳಿಸುವ ಹಾಗೆ 'ಹೂಂ' ಎನ್ನುತ್ತ ರಂಗರಾಯರು ಹೊರಟು ಹೋದರು. ಜಯದೇವನನ್ನು ಶಾಲೆಯಲ್ಲೆ ಬಿಟ್ಟು ನಂಜುಂಡಯ್ಯ ವೆಂಕಟರಾಯರೊಡನೆ ಹೋಟೆಲಿಗೆ ನಡೆದರು.

ಜಯದೇವ ಕಾಫಿತರಿಸಿ ಕುಡಿಯಲಿಲ್ಲ. ಅವನಿಗೆ ಏನೂ ಬೇಡವಾಗಿತ್ತು.

ಹೀಗಾಗುವುದೆಂದು ಆತ ನಿರೀಕ್ಷಿಸಿರಲಿಲ್ಲ. ಯಾರು ಸರಿ? ಯಾರು ತಪ್ಪು! ತಾನು ಉಪಾಧ್ಯಾಯನಾಗಿ ಬಂದಾಗ ತನಗೆ ಮುಗುಳ್ನಗೆಯ ಸ್ವಾಗತ ನೀಡಿದ ಮುಖ್ಯೋಪಾಧ್ಯಾಯ ರಂಗರಾಯರ ಮೇಲೆ ಆರೋಪಗಳು. ....ಯೋಗ್ಯರೀತಿಯಲ್ಲಿ ವಿಚಾರಣೆ ನಡೆಸಲಾಗದಂತಹ ಆರೋಪಗಳು. ಅದು ರಾಜಕೀಯಕ್ಕೆ ಸಂಬಂಧಿಸಿದ್ದು. ಸ್ವತಂತ್ರ ಭಾರತ ರಾಜ್ಯಾಂಗದಲ್ಲಿ ಅಭಿಪ್ರಾಯ ಸ್ವಾತಂತ್ರ್ಯಕ್ಕೆ ಆಸ್ಪದವಿಲ್ಲವೆ ಹಾಗಾದರೆ! ಅಲ್ಲಿ ಬರೆದಿರುವುದೆಲ್ಲಾ ಕಾಗದದ ಮೇಲಿನ ತೋರಿಕೆಯ ಮಾತುಗಳೆ?....ಜಯದೇವನಿಗೆ ಸ್ವತಃ ರಾಜಕೀಯದಲ್ಲಿ ಅಂತಹ ಆಸಕ್ತಿ ಇರಲಿಲ್ಲವಾದರೂ ಆತ ಯೋಚಿಸಿದ. ರಂಗರಾಯರು ತಪ್ಪು ಮಾಡಿದರೆಂದು ಹೇಳಲು ಅವನು ಸಿದ್ಧನಿರಲಿಲ್ಲ....ಇಷ್ಟು ಸ್ಪಷ್ಟವಾಗಿತ್ತು. ರಂಗರಾಯರು ಮತ್ತು ನಂಜುಂಡಯ್ಯನ ನಡುವಿನ ವಿರಸಕ್ಕೆ ಯಾವುದೋ ಸಣ್ಣ ಪುಟ್ಟ ತಪ್ಪುತಿಳಿವಳಿಕೆಯೇ ಕಾರಣವಿರಬೇಕು. ಅದು ಬೆಳೆದು ಇಬ್ಬರನ್ನೂ ಬೇರೆ ಬೇರೆಯಾಗಿ ಎರಡು ದಿಕ್ಕುಗಳಿಗೆ ಒಯ್ದಿರಬೇಕು....

"ಕಾಫಿ ತರ್ಲೋಲ್ವೆ ಸಾರ್?"

ಆ ಪ್ರಶ್ನೆ ಕೇಳಿ ಜಯದೇವ ತಿರುಗಿ ನೋಡಿದ. ವಿರೂಪಾಕ್ಷ ತನ್ನ ಇಬ್ಬರು ಸಹಪಾಠಿಗಳೊಡನೆ ನಿಂತಿದ್ದ ಬಾಗಿಲಲ್ಲೆ.

"ಬೇಡ ವಿರೂಪಾಕ್ಷ. ಈಗೇನೂ ಬೇಡ. ಸಾಯಂಕಾಲ ಕುಡೀತೀನಿ."

ಆದರೆ ಆ ಹುಡುಗರು ಅಷ್ಟರಲ್ಲೆ ಹೊರಟು ಹೋಗುವಂತಿರಲಿಲ್ಲ.

"ಅವರು ಯಾರು ಸಾರ್ ಬಂದಿದ್ದು?"

ಒಬ್ಬ ಹಾಗೆ ಕೇಳಿದರೆ ಇನ್ನೊಬ್ಬ ಬೇರೊಂದು ಪ್ರಶ್ನೆ ಕೇಳಿದ :

"ಅವರು ಇನ್ಸ್‌ಪೆಕ್ಟ್ರು ಸಾರ್?"

ಹೇಳಬಹುದೋ ಹೇಳಬಾರದೋ ಎಂಬ ಅನಿಶ್ಚಯತೆ ಕ್ಷಣಕಾಲ ಜಯದೇವನನ್ನು ಗೊಂದಲಕ್ಕೀಡುಮಾಡಿತು. ತನ್ನಿಂದಲೇ ಈ ವಾರ್ತೆ

ಹುಡುಗರಿಗೆ ತಿಳಿದರೆ ಮುಂದೆ ನಂಜುಂಡಯ್ಯ ಏನೆನ್ನುವರೊ ಎಂಬ ಶಂಕೆ ಬಾಧಿಸಿತು. ಆದರೂ ಆ ವಿಷಯ ಆಗ ಅಲ್ಲವಾದರೆ ಮತ್ತೆ ಎಲ್ಲರಿಗೂ ತಿಳಿಯಲೇಬೇಕಲ್ಲವೆ?

"ಹೊಸ ಹೆಡ್ಮೇಷ್ಟ್ರು ಬಂದಿದಾರೆ. ರಂಗರಾಯರಿಗೆ ವರ್ಗವಾಯ್ತು."

"ಓ!"

ವಿರೂಪಾಕ್ಷನ ಮುಖ ವಿವರ್ಣವಾಯಿತು. ತನ್ನ ಅಣ್ಣ ಮುಖ್ಯೋಪಾಧ್ಯಾಯರಾಗುವರೆಂದು ಆತ ಭಾವಿಸಿದ್ದು, ಈಗ ಆತನಿಗೆ ನಿರಾಶೆಯಾಗಿರಬೇಕೆಂಬುದು ಸ್ಪಷ್ಟವಾಗಿತ್ತು. ಜತೆಯಲ್ಲಿದ್ದ ಹುಡುಗರೂ ಅವನ ಮುಖವನ್ನೇ ನೋಡಿದರು. ಅವರಿಗೂ ರಂಗರಾಯರ ಮೇಲಿನ ಆರೋಪಗಳ ವಿಷಯ ತಿಳಿದಿತ್ತೇನೋ ಹಾಗಾದರೆ—?

ಹುಡುಗರು, ಹೊರಗೆ ಬಯಲಲ್ಲಿ ಮರದ ಕೆಳಗೂ ಜಗಲಿಯ ಮೇಲೂ ಆಡುತ್ತಲಿದ್ದವರಿಗೆಲ್ಲ ಸುದ್ದಿ ತಿಳಿಸಲು ಓಡಿಹೋದರು.

ಜಯದೇವ ಮೂಲೆಯಲ್ಲಿ ಬೀರುವಿನ ಮರೆಯಲ್ಲಿ ಇರಿಸಿದ್ದ ತನ್ನ ಸುರುಳಿ ಹಾಸಿಗೆಯನ್ನು ನೋಡಿದ... ಈ ಹೊಸ ಮುಖ್ಯೋಪಾಧ್ಯಾಯರೆಲ್ಲಿ ವಸತಿ ಮಾಡುವರೊ? ಸಂಸಾರವಂದಿಗನಿರಬೇಕು. ಕುಟುಂಬವನ್ನು ಕರೆದುಕೊಂಡು ಬರುವವರೆಗೆ ಅವರೂ ಕೂಡಾ ಶಾಲೆಯಲ್ಲೇ ಉಳಿಯುವರೇನೋ?

ಬೆಂಗಳೂರಿನಿಂದ ರಾತ್ರಿ ಹೊರಟು ಆ ದಿನ ಅಲ್ಲಿಗೆ ಬಂದಿದ್ದ ದಿನಪತ್ರಿಕೆಯನ್ನು ಕೈಗೆತ್ತಿಕೊಂಡು ಜಯದೇವ ಓದತೊಡಗಿದ. ಮೊದಲ ಪುಟದ ಶಿರೋನಾಮೆಗಳನ್ನೆಲ್ಲ ಆತ ಓದಿದ್ದಾಯಿತು. ಅದೇನು ಓದುತ್ತಿದ್ದನೆಂಬುದು ಅವನಿಗೇ ತಿಳಿಯಲಿಲ್ಲ...ಅಗ್ರ ಲೇಖನವೂ ಅಷ್ಟೆ...ಆದರೆ ಸ್ಥಳೀಯ ಸುದ್ದಿಗಳ ಪುಟ ಬಂದಾಗ ಅವನ ಆಸಕ್ತಿ ಕೆರಳಿತು. ಸಣ್ಣ ಪುಟ್ಟ ಊರುಗಳ ಸಣ್ಣ ಪುಟ್ಟ ವಿಷಯಗಳನ್ನೆಲ್ಲ ಓದಿದ. ತಾನು ದುಡಿಯಲು ಬಂದಿದ್ದ ಊರಿನ ವಾರ್ತೆಯೇನೂ ಆ ದಿನಪತ್ರಿಕೆಯಲ್ಲಿ ಇರಲಿಲ್ಲ. ಅಷ್ಟು ಮಹತ್ವವಿದ್ದರಲ್ಲವೆ ಆ ಊರಿಗೆ?

ಕಿಲಕಿಲ ನಗು—ಗುಸು ಗುಸು ಮಾತು... ಕೈ ಬಳೆಗಳ ಸದ್ದು ಕೂಡಾ.

ಪತ್ರಿಕೆಯೋದುವುದನ್ನು ನಿಲ್ಲಿಸಿ ಜಯದೇವ ತಿರುಗಿ ನೋಡಿದ

ನಾಲ್ವರು ಹುಡುಗಿಯರು ಅಲ್ಲಿ ನಿಂತಿದ್ದರು. ನಾಲ್ಕನೆಯ ತರಗತಿಯವರು. ಅವರಲ್ಲಿ ಹೆಚ್ಚು ಬುದ್ಧಿವಂತೆಯಾದ ವಿದ್ಯಾರ್ಥಿನಿ ಪ್ರಭಾಮಣಿ ಕೇಳಿದಳು:

"ಪುರಸೊತ್ತಿದೆಯಾ ಸಾರ್ ?"

"ಯಾಕಮ್ಮ? ಏನಾಗ್ಬೇಕು?"

"ಒಂದೆರಡು ವಿಷಯ ಕೇಳ್ಬೇಕಾಗಿತ್ತು."

"ಬನ್ನಿ ಒಳಕ್ಕೆ."

ಆ ನಾಲ್ವರೂ ಬಂದು ಜಯದೇವನ ಸಮೀಪದಲ್ಲಿ ನಿಂತುಕೊಂಡರು. ಪ್ರಭಾಮಣಿ ಚಿಕ್ಕ ಹುಡುಗಿ—ಹದಿಮೂರು ಇರಬಹುದು. ಅವಳು ಸೀರೆ ಉಟ್ಟಿದ್ದರೂ ಆ ಉಡುಗೆ ಬೊಂಬೆಗೆ ಸೀರೆಯುಡಿಸಿದ ಹಾಗಿತ್ತು. ಉಳಿದಿಬ್ಬರು ಲಂಗ ತೊಟ್ಟಿದ್ದರು. ನಾಲ್ಕನೆಯವಳು ಮಾತ್ರ ದೊಡ್ಡವಳು. ಹದಿನಾಲ್ಕು ದಾಟಿತ್ತೇನೋ. ಉಟ್ಟಿದ್ದ ಸೀರೆ ಮೈ ಸೊಬಗನ್ನು ಹೆಚ್ಚಿಸಿತ್ತು. ಬಣ್ಣ ನಸುಗೆಂಪು. ತುಂಬಿತುಳುಕುತಿದ್ದ ಆರೋಗ್ಯ, ನಗೆಯ ರೂಪದಲ್ಲಿ ಚೆಲ್ಲಾಟವಾಡಬಯಸುತಿತ್ತು. ಕಣ್ಣುಗಳು ಚಂಚಲವಾಗಿದ್ದುವು. ಜಯದೇವನಿಗೆ ಒಂದು ವಿಧವಾಯಿತು. ಹುಡುಗಿಯರ ಸಾಮೀಪ್ಯ ಅವನಿಗೆ ಹೊಸದಾಗಿರಲಿಲ್ಲ. ಬೆಂಗಳೂರಲ್ಲಿ ಸುನಂದಾ ಆತನೊಡನೆ ಒಡನಾಟವಾಡಿ ಸಂಕೋಚವನ್ನೆಲ್ಲ ತೊಡೆದು ಹಾಕಿದ್ದಳು. ಆದರೂ ಮೂವರನ್ನು ಮುಂದೆ ಬಿಟ್ಟು ತಾನೊಬ್ಬಳೇ ಹಿಂದೆ ನಿಂತು ತನ್ನನ್ನು ಸೂಕ್ಷ್ಮವಾಗಿ ನೋಡುತಿದ್ದ ಆ ಹುಡುಗಿ...ಆ ನೋಟ...ಹದಿನಾಲ್ಕಕ್ಕಿಂತಲೂ ಜಾಸ್ತಿಯಾಗಿತ್ತೇನೋ ವಯಸ್ಸು....

"ಏನು ವಿಷಯ ಕೇಳಿ."

"ವೀರಮಾತೆ ವಿಮಲಾ ಪಾಠಕ್ಕೆ ಸಂಬಂಧಿಸಿದ್ದು ಸಾರ್."

"ಅದಕ್ಕೆ, ಏನು ಕಷ್ಟವಿದೆ ಆ ಪಾಠದಲ್ಲಿ?"

ಹುಡುಗಿಯರು ಸಂದೇಹವೆಂದು ಏನೇನನ್ನೋ ಕೇಳಿದರು. ಅದು ಹೀಗೆ ಯಾಕೆ? ಹಾಗೆ ಯಾಕೆ? 'ಈ ಪದದ ಅರ್ಥವೇನು ಸಾರ್? 'ಇದು ನಿಜವಾಗಿಯೂ ನಡೆದದ್ದೇ ಸಾರ್?' 'ಸುಳ್ಳು ಚರಿತ್ರೆ ಬರೆಯೋಕೆ ಆಗಲ್ವೆ ಸಾರ್?'

ತಾನು ಉಪಾಧ್ಯಾಯನೆಂಬುದನ್ನು ಮರೆಯದೆ ಜಯದೇವ ಎಲ್ಲವನ್ನೂ ವಿವರಿಸಿದ. ವಿವರಿಸುತ್ತ ಗುಂಪಿನಲ್ಲಿದ್ದ ದೊಡ್ಡ ಹುಡುಗಿಯನ್ನು

ನೋಡಿದ. ಅಲ್ಲಿದ್ದ ಮೆಚ್ಚುಗೆಯ ದೃಷ್ಟಿ....ಸಂದೇಹ ಕೇಳಲು ಬಂದ ಹುಡುಗಿಯಲ್ಲ ಈಕೆ. ಅವನ್ನು ನೆಪವಮಾಡಿಕೊಂಡು ಪ್ರಭಾಮಣಿಯನ್ನು ಮುಂದಿಟ್ಟು ಬಂದಿದ್ದಾಳೆ— ಎಂದು ಜಯದೇವನಿಗೆ ಅನಿಸಿತು.

"ಹೆಡ್ಮೇಷ್ಟ್ರು ಬಂದ್ರು !" ಎಂದಳೊಬ್ಬಳು ಹುಡುಗಿ.

ಆಫೀಸು ಕೊಠಡಿಗೆ ವಿದ್ಯಾರ್ಥಿನಿಯರನ್ನು ಬರಬಿಟ್ಟುದು ತಪ್ಪಾಯಿತೇನೊ ಎಂದು ಜಯದೇವನಿಗೆ ಅಳುಕಿತು.

"ಗಂಟೆ ಬಾರಿಸೋ ಹೊತ್ತಾಯ್ತು, ಕ್ಲಾಸಿಗೆ ಹೋಗಿವ್ಮಾ."

ಹುಡುಗಿಯರು ಹಿಂತಿರುಗುತಿದ್ದಾಗಲೆ ರಂಗರಾಯರು ಬಂದುಬಿಟ್ಟರು. ಆ ಮುಖದಲ್ಲಿದ್ದ ಶಾಂತತೆ ಜಯದೇವನನ್ನು ಚಕಿತಗೊಳಿಸಿತು.

"ಏನಮ್ಮ, ಪ್ರಭಾ—ಹೊಸ ಮೇಷ್ಟ್ರಿಗೆ ಹಾಯಾಗಿ ಕೂತಿರೋಕೂ ಬಿಡಲ್ವಲ್ಲೇ ನೀನು ?" ಎಂದರು ಅವರು.

"ಏನೋ ಸಂಶಯ ಕೇಳ್ಬೇಕಾಗಿತ್ತು ಸಾರ್."

ರಂಗರಾಯರು ಜಯದೇವನತ್ತ ತಿರುಗಿ ಹೇಳಿದರು :

"ಹೇಳ್ಕೊಟ್ರಾ ಜಯದೇವ್? ಈ ಪ್ರಭಾಮಣಿ ಮೊದಲ್ನೇ ತರಗತಿಯಿಂದ ಈವರೆಗೂ ಹೀಗೆಯೇ. ಎಷ್ಟು ಹೇಳ್ಕೊಟ್ಟರೂ ತೃಪ್ತಿಯಿಲ್ಲ ಅವಳಿಗೆ !"

ಜಯದೇವ ಮುಗುಳುನಕ್ಕ.

ರಂಗರಾಯರು ಹೊರಹೊರಡುತ್ತಿದ್ದ ಹುಡುಗಿಯರನ್ನು ತಡೆದರು.

"ನಿಮಗೆ ಗೊತ್ತೇನ್ರೇ ? ನನಗೆ ವರ್ಗವಾಯ್ತು. ಬೇರೆ ಊರಿಗೆ ಹೊರಟ್ಹೋಗ್ತೀನಿ."

ಆ ಸ್ವರ ಕಂಪಿಸುತಿತ್ತು. ಒಳಗಿನ ಕೊರಗನ್ನು ತೋರಿಸಲೆಳಸಿದ ಭಾವವೇಗಳನ್ನೆಲ್ಲ, ಪ್ರಯತ್ನಪೂರ್ವಕವಾಗಿ ಅವರು ತಡೆಹಿಡಿದಿದ್ದರು.

ಆ ಹುಡುಗಿಯರ ಮುಖಗಳು ಕಪ್ಪಿಟ್ಟುವು.

"ಇಲ್ಲಿಗೆ ಬೇರೆ ಯಾರು ಬರ್ತಾರೆ ಸಾರ್ ?"

"ಬಂದ್ಬಿಟ್ಟಿದಾರೆ, ನೋಡ್ಲಿಲ್ವೇನು ನೀವು ?"

ಪ್ರಭಾಮಣಿ "ಇಲ್ಲ" ಎನ್ನುವುದಕ್ಕೂ ವೆಂಕಟರಾಯರೊಡನೆ ನಂಜುಂಡಯ್ಯ ಬರುತಿದ್ದುದಕ್ಕೂ ಸರಿಹೋಯಿತು.

"ಅಲ್ನೋಡಿ," ಎಂದರು ರಂಗರಾಯರು.

ಬರುತಿದ್ದವರನ್ನು ನೋಡುತ್ತಲೆ ಹುಡುಗಿಯರು ಓಡಿಹೋದರು.

"ಬಂದ ಷುರುನಲ್ಲೇ ನಿಮಗೆ ಒಳ್ಳೆ ಅನುಭವ ಆದಹಾಗಾಯ್ತು, ಅಲ್ವೆ ಜಯದೇವ್ ?"

"ಏನೋ ಸಾರ್..."

ಮತ್ತೇನನ್ನು ಹೇಳಬೇಕೆಂದು ಜಯದೇವನಿಗೆ ತೋಚಲಿಲ್ಲ.

ಅಷ್ಟರಲ್ಲಿ ನಾಲ್ಕನೆಯ ತರಗತಿಯ ಹಿರೇಮಣಿ ಗಂಟೆಬಾರಿಸುವ ಕಬ್ಬಿಣದ ಕೋಲಿನೊಡನೆ ಬಂದ.

"ಟೈಂ ಆಯ್ತೆ ಸಾರ್ ?"

"ಇನ್ನೂ ಎರಡು ನಿಮಿಷ ಇದೆಯಲ್ಲೊ ?... ಹೂಂ... ಹೊಡಿ !"

ಶಾಲೆಯ ಗಂಟೆ ಬಾರಿಸಿತು. ಆ ಅಲೆಗಳು ಮೌನವಾಗುವುದಕ್ಕೆ ಮುಂಚೆಯೆ ಹುಡುಗ ಹುಡುಗಿಯರೆಲ್ಲ ತಮ್ಮ ತಮ್ಮ ತರಗತಿಗಳನ್ನು ಸೇರಿಕೊಂಡರು.

ರಂಗರಾಯರೆಂದರು:

"ನಾಳೆ ಬಂದ್ಬಿಡುತ್ತೆ ಆಜ್ಞಾಪತ್ರ. ಅಂತೂ ಈ ಊರಲ್ಲಿ ಇವತ್ತು ನಾನು ಮಾಡೋ ಪಾಠವೇ ಕೊನೇದು"

ಜಯದೇವನಿಗೆ ಬಲು ಖೇದವೆನಿಸಿತು.

# ೬

ರಂಗರಾಯರನ್ನು ಬೀಳ್ಕೊಡುವುದಕ್ಕೋಸ್ಕರ ಊರಿನವರು ಸತ್ಕಾರ ಕೂಟ ಏರ್ಪಡಿಸಬಹುದೆಂದು ಜಯದೇವ ನಿರೀಕ್ಷಿಸಿದ್ದು ಸುಳ್ಳಾಯಿತು. ಯಾರಾದರೂ ಆ ಮಾತನ್ನೆತ್ತಿದರೆ ನಿರಾಕರಿಸಬೇಕೆಂದು ರಂಗರಾಯರೇನೋ ತೀರ್ಮಾನಿಸಿದ್ದರು. ಆದರೆ ಆ ಮಾತು ಬರಲೇ ಇಲ್ಲ.

ವೆಂಕಟರಾಯರು ಆಗಮಿಸಿದ ಮಾರನೆಯ ದಿನ ಅಂಚೆಯ ಮೂಲಕ ಆಜ್ಞಾಪತ್ರ ಬಂದೊಡನೆ ರಂಗರಾಯರು ಅಧಿಕಾರ ವಹಿಸಿಕೊಟ್ಟರು. ಎಲ್ಲ ತರಗತಿಗಳಿಗೂ ಹೋಗಿ, ತಾನು ಹೊರಡುವೆನೆಂದು ಹೇಳಿ ಬಂದರು. ಆಫೀಸು ಕೊಠಡಿಗೆ ಬಂದು ಐದು ನಿಮಿಷ ಮೌನವಾಗಿ ಅಲ್ಲಿಯೆ ಕುಳಿತರು. ಕೊರಳಿನ ನರಗಳು ಊದಿಕೊಂಡಿದ್ದುವು. ಮುಖ ಕೆಂಪುಕೆಂಪಾಗಿತ್ತು. ಮಧ್ಯಾಹ್ನದ ವಿರಾಮ ಕಳೆದು ವೆಂಕಟರಾಯರೂ ನಂಜುಂಡಯ್ಯನೂ ತರಗತಿಗಳಿಗೆ ಹೊರಟೊಡನೆ ರಂಗರಾಯರೆದ್ದರು.

"ಮನೆಗೆ ಹೊರಟ್ರೇನಾ ಸಾರ್ ?" ಎಂದು ಕೇಳಿದ ಜಯದೇವ.

ಅವರು ಹೌದೆಂದು ತಲೆಯಾಡಿಸಿದರು.

"ಊಟಮಾಡ್ಕೊಂಡು ವಾಪ್ಸ ಬರ್ತೀರಾ ?"

"ಯಾಕ್ಬರ್ಲಿ ಇನ್ನು ?"

ರಂಗರಾಯರ ಹೃದಯದೊಳಗಾಗುತ್ತಿದ್ದ ಸಂಕಟವನ್ನು ಕಂಡು ಜಯದೇವನಿಗೆ ಕೆಡುಕೆನಿಸಿತು.

"ಸಾಯಂಕಾಲ ಮನೇಲಿ ಇರ್ತೀರಾ ಸಾರ್ ?"

"ಇರ್ತೀನಿ ಜಯದೇವ್. ಯಾಕೆ ? ಮನೆಗ್ಬರ್ತೀರೇನು? ಶಿಕ್ಷೆ, ಅಂತ ನನ್ನ ವರ್ಗಾಯಿಸಿದಾರೆ. ನೀವಿನ್ನು ನನ್ಜತೇಲಿ ಮಾತಾಡೋದು ಚೆನ್ನಾಗಿ ರುತ್ತೋ ಇಲ್ಲವೊ—"

ಆ ಮಾತಿನಲ್ಲಿ ಸತ್ಯಾಂಶವಿತ್ತು. ಆದರೆ ಅದು, ಜಯದೇವ ಸ್ವೀಕರಿಸಲು ಸಿದ್ಧನಿದ್ದ ಆಹ್ವಾನ. ಎದ್ದು ನಿಂತು ಅವನೆಂದ:

"ಪರವಾಗಿಲ್ಲ ಸಾರ್. ನನಗೆ ಯಾರ ಹೆದರಿಕೇನೂ ಇಲ್ಲ-ಹಂಗೂ ಇಲ್ಲ."

ಆ ಮಾತುಗಳಿಗಾಗಿ ಕೃತಜ್ಞ ಎಂಬರ್ಥದ ನೋಟವನ್ನು ಬೀರಿ ರಂಗರಾಯರು ಹೊರಟೇ ಹೋದರು. ಜಯದೇವ ಎರಡನೆ ತರಗತಿಯತ್ತ ಕಾಲು ಹಾಕಿದ.

ತರಗತಿಗಳು ಮುಗಿದು ಉಪಾಧ್ಯಾಯರೆಲ್ಲ ಮತ್ತೆ ಕಲೆತಾಗ ರಂಗರಾಯರ ಪ್ರಸ್ತಾಪವೇ ಬಂತು.

"ಆಸಾಮಿ ಇಷ್ಟೆಲ್ಲ ತೊಂದರೆ ಕೊಟ್ಟ ಅಲ್ವೆ ?"

ವೆಂಕಟರಾಯರ ಆ ಧ್ವನಿಯಲ್ಲಿ ಮೂದಲಿಕೆಯಿತ್ತು. ರಂಗರಾಯರನ್ನು ಏಕವಚನದಲ್ಲಿ 'ಆಸಾಮಿ' ಎಂದೆಲ್ಲ ಕರೆದುದು ಜಯದೇವನಿಗೆ ಮೆಚ್ಚಿಗೆಯಾಗಲಿಲ್ಲ.

ನಂಜುಂಡಯ್ಯ ತಾವು ಅನುಭವಿಸಿದ ತೊಂದರೆಯನ್ನು ವಿವರಿಸಿದರು.

"ಏನ್ಮಾಡೋಣ ಹೇಳಿ? ಆರು ತಿಂಗಳು ಹಿಡಿಯಿತು—ಇಷ್ಟಾಗ್ಬೇಕಾದ್ರೆ. ನಮ್ಮ ಡಿ. ಇ. ಒ. ಅಂತೂ ಮೃದುಮನುಷ್ಯ. ಆ ಗುಮಾನ ಉಪಯೋಗಿಸ್ಕೊಂಬಿಟ್ರು ಈ ರಂಗರಾಯರು. ಹೀಗಾಗಿ ತಡವಾಯ್ತು."

"ವಿದ್ಯಾಸಚಿವರೇ ಸ್ವತಃ ದೂರು ಸ್ವೀಕರಿಸಿ ತನಿಖೆಯಾಗಲೀಂತ ಆಜ್ಞೆ ಕೊಟ್ರಂತೆ."

"ಹೌದು; ಹೌದು."

"ಡಿ. ಪಿ. ಐ. ಆಫೀಸ್ನಲ್ಲಿ ತೀರ್ತು—ಸಸ್ಪೆಂಡ್ ಮಾಡ್ಬೇಕೂಂತ್ಲೇ ಇದ್ರಂತೆ. ಆದರೆ ನಿವೃತ್ತಿ ಹೊಂದೋ ಸಮಯ—ಹಾಳಾಗಿ ಹೋಗ್ಲೀಂತ ಬಿಟ್ಬಿಟ್ರಂತೆ."

ಜಯದೇವನಿದ್ದುದನ್ನು ಅವರಿಬ್ಬರೂ ಗಮನಿಸಲಿಲ್ಲ. ಎಳೆಯನಾದ ಹೊಸಬನಾದ ಜಯದೇವ ತಮ್ಮ ಅಭಿಪ್ರಾಯವನ್ನು ವಿನೀತನಾಗಿ ಒಪ್ಪಿಕೊಳ್ಳಲೇ ಬೇಕು ಎಂದು ಅವರು ಭಾವಿಸಿದಂತೆ ತೋರಿತು. 'ನಿನಗೂ ಒಂದು ಅಭಿಪ್ರಾಯವುಂಟೇ ?' ಎಂದು ಜಯದೇವನನ್ನು ಅವರು ಕೇಳಲೂ ಇಲ್ಲ.

ನಂಜುಂಡಯ್ಯ ಒಂದು ಮಾತಂದರು :

"ನನ್ನ ಮನಸ್ನಲ್ಲೇನಿತ್ತು ಗೊತ್ತೆ ಸಾರ್ ? ಏನಾದರೂ ವಿಚಾರಣೆಯಾಗಿ ರಂಗರಾವ್‌ಗೆ ಒಂದು ಇಲ್ಲವೆ ಎರಡು ರೂಪಾಯಿ ಜುಲ್ಮಾನೆ ಆಗ್ಬೇಕೂಂತ—"

ಜಯದೇವನಿಗೆ ಆಮಾತು ಅಸಹ್ಯ ಸಿಸಿತು. ಥೂ-ಥೂ... ವೆಂಕಟ ರಾಯರು ಕೂಡಾ ಅದನ್ನು ಮೆಚ್ಚಿಕೊಳ್ಳಲಾರರು-ಎಂದು ಆವನ ಮನಸ್ಸು ಸಿಡಿನುಡಿಯಿತು.

ಆದರೆ ಜಯದೇವನ ತಿಳಿವಳಿಕೆಗೆ ನಿಲುಕದ ಎತ್ತರದಲ್ಲಿದ್ದರು ವೆಂಕಟ ರಾಯರು.

"ಅದು ಅಷ್ಟು ಸುಲಭವಲ್ಲ ನಂಜುಂಡಯ್ಯ. ಅದಕ್ಕೆ ಆ ವ್ಯಕ್ತಿ ಗುರು ತರವಾದ ಅಪರಾಧ ಮಾಡಿರ್ಬೇಕು."

"ಅದು ನಿಜ ಅನ್ನಿ."

"ಅಷ್ಟೇ ಅಲ್ಲ. ಈಗ ಅಸೆಂಬ್ಲೀಲಿ ವಿರೋಧಪಕ್ಷದವರೂ ಕೆಲವರಿ ದಾರೆ ನೋಡಿ. ಇಲಾಖೆಯವರು ಹುಷಾರಾಗಿ ಇರದೇ ಇದ್ರೆ, ಆ ಗೋಪಾಲ ಗೌಡ ಅಂಥವರಿಗೇನಾದರೂ ಈ ವಿಷಯ ತಿಳಿಯಿತೂಂತಿಟ್ಕೊಳ್ಳಿ—ಆಗೇ ಹೋಯ್ತು! ಇನ್ನು ಬೆಂಗಳೂರಿನ ಪತ್ರಿಕೆಗಳೋ-ಅವಕ್ಕೆ ಲಂಗು ಲಗಾಮು ಒಂದೂ ಇಲ್ಲ..."

ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದಲ್ಲಿ ಬಡ ಉಪಾಧ್ಯಾಯರ ಪ್ರಶ್ನೆ ಬಂದುದನ್ನು, ಪತ್ರಿಕೆಗಳಲ್ಲಿ ಪ್ರಕಟವಾದ ಟೀಕೆ ಟಿಪ್ಪಣಿಗಳನ್ನು ಜಯದೇವ ಓದಿದ್ದ. ತಾನು ಉಪಾಧ್ಯಾಯನಾಗದೆ ಇದ್ದಾಗಲೂ ಅಂತಹ ವಿಷಯದ ಕಡೆಗೆ ಅವನ ಗಮನ ಹೋಗುತ್ತಿತ್ತು. ಬಡ ಉಪಾಧ್ಯಾಯರ ಪರವಾದ ಪ್ರಸ್ತಾಪ ಬಂದಾಗಲೆಲ್ಲಾ ಅವನಿಗೆ ಸಂತೋಷವಾಗುತ್ತಿತ್ತು. ಆದರೆ ವೆಂಕಟರಾಯರ ದೃಷ್ಟಿಯಲ್ಲಿ ಅದು ಹಾಗಿರಲಿಲ್ಲ....

"ಏನು ಜಯದೇವ್ ಸುಮ್ಮನೆ ಕೂತಿದೀರಲ್ಲ?"

"ನನಗೆ, ಈ ಸಚಿವರು-ಅಸೆಂಬ್ಲಿ ವಿಷಯ-ಏನೂ ಗೊತ್ತಾಗೋದಿಲ್ಲ ಸಾರ್."

"ಅದು ನಿಜ ಅನ್ನಿ, ರಾಜಕೀಯ ಅಂದ್ರೆ ಸಾಮಾನ್ಯ ವಿಷಯವೇನಲ್ಲ!"

ನಂಜುಂಡಯ್ಯನಿಗೆ, ವೆಂಕಟರಾಯರು ಬಂದರೆಂದು ಪರಮ ಸಂತೋಷ ವಾಗುವುದೇನೂ ಸಾಧ್ಯವಿರಲಿಲ್ಲ. ಕಾರಣ, ಈ ರಾಯರೆಲ್ಲಾ ಒಂದೇ ಜನ. ಆದರೂ ವೆಂಕಟರಾಯರ ಮನಸಿನ ಆಳವನ್ನು ತಿಳಿದುಕೊಳ್ಳಲು ನಂಜುಂ ಡಯ್ಯ ಕುತೂಹಲಿಯಾದರು. ಅಲ್ಲದೆ ರಂಗರಾಯರ ದೆಸೆಯಿಂದ ಅವರಿಬ್ಬ ರಲ್ಲಿ ಒಂದು ರೀತಿಯ ಒಮ್ಮತವೂ ಇತ್ತಲ್ಲವೆ? ವೆಂಕಟರಾಯರನ್ನು

ತಮಗೆ ಬೇಕಾದವರಾಗಿ ಮಾಡುವುದು ಅಗತ್ಯವಾಗಿಯೂ ಇತ್ತು. ಅದನ್ನು ಸಾಧಿಸಲೆಂದು ನಂಜುಂಡಯ್ಯ ಹೂಬಾಣವನ್ನು ತಮ್ಮ ಹೆದೆಗೇರಿಸಿದರು.

"ನಿಮಗಂತೂ ಈ ರಾಜಕೀಯ ವಿಷಯವಲ್ಲೆಲ್ಲಾ ತುಂಬಾ ಪರಿಶ್ರಮ ಅಂತ ತೋರುತ್ತೆ."

"ಒಂದು ರೀತೀಲಿ ಹಾಗನ್ಬ್ಹುದು ನಂಜುಂಡಯ್ಯ. ಮಲೆನಾಡ್ನಲ್ಲೊಂದು ಗಾದೆ ಇದೆ—ಕಾಲ ಬಂದ ಹಾಗೆ ಕೋಲ ಅಂತ. ಹಾಗೆ ನಾನು. ಮೊದಲಿಂದ್ಲೂ ಅಷ್ಟೆ. ದಿವಾನರ ಕಾಲ್ದಲ್ಲಿ ನಿಷ್ಠಾವಂತನಾದ ರಾಜಭಕ್ತ. ಅದಾದ್ಮೇಲೆ ರಾಷ್ಟ್ರೀಯವಾದಿ. ಹ್ಯಾಟೇ ನನಗೆ ಮೆಚ್ಚುಗೆ ಆದ್ರೂ ಒಂದೊಂದ್ಸಲ ಬಿಳೀಟೋಪೀನೂ ಹಾಕ್ಕೊಂಡಿದ್ದೀನಿ. ಕಾಲಪ್ರವಾಹದಲ್ಲಿ ನಾವೂ ಉರುಳ್ಬೇಕು!"

ಇದು ಸಂದರ್ಭಸಾಧನೆ—ಎಂದಿತು ಜಯದೇವನ ಮನಸ್ಸು. ಆದರೆ ವೆಂಕಟರಾಯರ ದೃಷ್ಟಿಯಲ್ಲಿ ಅದು ಆಧುನಿಕ ನವನಾಗರಿಕ ಲಕ್ಷಣ,—ಲೋಕಜ್ಞಾನ.

ತಮಗೆ ತಿಳಿಯದೆಯೇ ಹಾಸ್ಯಾಸ್ಪದವಾಗುವಂತಹ ರೀತಿಯಲ್ಲಿ ವೆಂಕಟರಾಯರು ಆಡಿದ ಮಾತುಗಳನ್ನು ನಂಜುಂಡಯ್ಯ ಅಲ್ಲಗಳೆಯಲಿಲ್ಲವಾದರೂ ತಮ್ಮ ಅಮೂಲ್ಯ ಅಭಿಪ್ರಾಯವನ್ನು ಅವರು ಬೇರೆ ರೀತಿಯಲ್ಲಿ ಮಂಡಿಸಿದರು:

"ಯಾರು ರಾಜ್ಯ ಆಳಿದರೇನು? ನಾವು ವಿದ್ಯಾದಾನ ಮಾಡುತ್ಲೇ ಇರ್ಬೇಕು."

"ಸರಿಯಾಗಿ ಹೇಳಿದಿರಿ!" ಎಂದರು ವೆಂಕಟರಾಯರು.

ತಮ್ಮ ಮಾತು ಜಯದೇವನ ಮೇಲೇನು ಪರಿಣಾಮ ಮಾಡಿತೆಂದು ನೋಡಲು ನಂಜುಂಡಯ್ಯ ಆವನತ್ತ ತಿರುಗಿದರು. ಆದರೆ ಆ ಮುಖದ ಮೇಲಿದ್ದ ಭಾವನೆ ದೊಡ್ಡ ಶೂನ್ಯವಾಗಿತ್ತು.

ಕಾಫಿಗೆಂದು, ವಾಯುವಿಹಾರಕ್ಕೆಂದು, ಅವರಿಬ್ಬರೆದ್ದರು. ಮನಸ್ಸಿಲ್ಲದೆ ಹೋದರೂ ಜಯದೇವನೂ ಏಳಬೇಕಾಯಿತು. ಶಾಲೆಯ ಬಾಗಿಲುಗಳಿಗೆ ಆತ ಬೀಗ ತಗುಲಿಸಿದ.

"ಇದೇನು ಬೀಗದ ಕೈ ನಿಮ್ಮಲ್ಲಿದೆಯಲ್ಲಾ ಮಿ. ಜಯದೇವ್?"

ಆತ ಮಲಗುವುದೇ ಅಲ್ಲೆಂದು ನಂಜುಂಡಯ್ಯ ವೆಂಕಟರಾಯರಿಗೆ ವಿವರಣೆ ಇತ್ತರು. ಆದರೆ ಆ ವಿಷಯ ತಿಳಿದು ಹೊಸ ಮುಖ್ಯೋಪಾಧ್ಯಾ

ಯರಿಗೆ ಅಸಮಾಧಾನವಾಯಿತು. ಬರುತಿದ್ದಾಗ ಅವರು, ಮನೆ ಮಾಡುವ ತನಕ ಶಾಲೆಯಲ್ಲಿ ಉಳಿದುಕೊಂಡರಾಯಿತೆಂದು ಯೋಚಿಸಿದ್ದರೇನೋ ನಿಜ. ಆದರೆ ಜಯದೇವನೂ ಶಾಲೆಯಲ್ಲೇ ಇರುವುದನ್ನು ತಿಳಿದಾಗ ಅವರು ತಮ್ಮ ಅಭಿಪ್ರಾಯ ಬದಲಾಯಿಸಿದರು. ಉಪಾಧ್ಯಾಯರು ಶಾಲೆಯಲ್ಲಿ ವಸತಿ ಮಾಡುವುದರ ಔಚಿತ್ಯ-ಅನೌಚಿತ್ಯಗಳ ಪ್ರಶ್ನೆ ಒಡನೆಯೇ ಅವರನ್ನು ಬಾಧಿಸ ತೊಡಗಿತು. ಆ ಪ್ರಶ್ನೆಗೆ ಉತ್ತರ ಕೊಡುವುದನ್ನೂ ಅವರು ತಡಮಾಡಲಿಲ್ಲ.

"ಉಪಾಧ್ಯಾಯರು ಶಾಲೆಯಲ್ಲೇ ಮಲಕೊಳ್ಳೋದು ಚನ್ನಾಗಿರೋದಿಲ್ಲ ಮಿ. ಜಯದೇವ್. ನೀವು ಬೇಗ್ನೆ ಬೇರೆ ಮನೆ ಮಾಡ್ಬೇಕು."

"ಹೌದು, ಹುಡುಕ್ತಾ ಇದೀನಿ."

ಅದು ನಿಜವಾಗಿರಲಿಲ್ಲ. ಆದರೆ ವೆಂಕಟರಾಯರೆದುರು ಅಂಥದೊಂದು ಪುಟ್ಟ ಸುಳ್ಳು ಹೇಳುವುದು ತಪ್ಪಲ್ಲವೆಂದು ಜಯದೇವನಿಗೆ ತೋರಿತು.

ಆ ಮಾತಿನ ಫಲವಾಗಿ ವೆಂಕಟರಾಯರ ವಸತಿಯ ಪ್ರಶ್ನೆಯೂ ಪ್ರಧಾನವಾಗಲಿಲ್ಲ.

ಆಗ ನಂಜುಂಡಯ್ಯನೆಂದರು:

"ನಮ್ಮ ಪಂಚಾಯತ ಬೋರ್ಡಿನ ಅಧ್ಯಕ್ಷರು ಶಂಕರಪ್ಪ ಅಂತ. ನೀವು ಕೇಳಿರ್ಬೇಕು."

"ಕೇಳ್ದೆ ಉಂಟೆ? ಬೆಂಗಳೂರಲ್ಲೇ ಅವರ ವಿಷಯ ತಿಳೀತು."

"ನೀವು ಮನೆಮಾಡೋವರೆಗೂ ತಮ್ಮಲ್ಲೇ ಇರ್ಬೇಕೂಂತ ಶಂಕರಪ್ಪ ಆಗಲೇ ಹೇಳಿದಾರೆ. ಅಲ್ಲಿ ಬೇಕಾದಷ್ಟು ಖಾಲಿ ಕೊಠಡಿಗಳಿವೆ. ಪಕ್ಕದಲ್ಲೇ ಒಂದು ಬ್ರಾಹ್ಮಣರ ಮನೆ ಇದೆ. ಅಲ್ಲಿ ಊಟಕ್ಕೆ ಏರ್ಪಾಡು ಮಾಡ್ತಾರೆ."

"ಆಗಲಿ ಆಗಲಿ, ಹಾಗೇ ಆಗಲಿ. ಆದರೆ ಈ ತಿಂಗಳಲ್ಲೇ ಮನೆ ಮಾಡ್ಬೇಕೂಂತಿದೀನಿ."

"ಅದಕ್ಕೇನಂತೆ? ಹಾಗೇ ಮಾಡಿ."

"ರಂಗರಾಯರು ಇರೋ ಮನೆ ಹೇಗಿದೆ?"

"ಚೆನ್ನಾಗಿದೆ. ಸ್ವಲ್ಪ ರಿಪೇರಿ ಮಾಡಿಸ್ಬೇಕೋ ಏನೋ."

"ಎಷ್ಟೊ ಬಾಡಿಗೆ?

"ಆರು ರೂಪಾಯಿಯೊ ಏಳು ರೂಪಾಯಿಯೊ ಇರಬೇಕು. ಅದರ ಮಾಲಿಕರಿಗೆ ತಿಳಿಸೋಣ್ವೇನು?"

"ಅವಸರವೇನು? ಒಂದು ತಿಂಗಳಾದ್ಮೇಲೆ ಹೇಳಿದರಾಯ್ತು. ಅಲ್ಲದೆ, ಆ ರಂಗರಾವ್‌ಗೆ ನಾನು ಆ ಮನೆಗೆ ಬರ್‍ತೀನೀಂತ ಗೊತ್ತಾಗ್ದೆ ಇರೋದೇ ಮೇಲು."

"ಗೊತ್ತಾದ್ರೂ ಏನು ಮಹಾ?"

"ಹಾಗಲ್ಲ-ಹಾಗಲ್ಲ..."

"ಯಾವತ್ತು ಹೊರಡುತ್ತೊ ಆ ಸಾಮಿ. ನಿಮಗೇನಾದ್ರೂ ಹೇಳಿದ್ರೇ ಜಯದೇವ್?"

"ಇಲ್ವಲ್ಲಾ ನಿಮಗೆ ಹೇಳಿರ್ತಾರೇಂತಿದ್ದೆ."

ಹೇಗೆ ಹೊರಟುಬಿಟ್ಟಿತ್ತು ಆ ಧೋರಣೆಯ ಮಾತು! ಸಂಜೆ ರಂಗ ರಾಯರ ಮನೆಗೆ ಬರುವೆನೆಂದಿದ್ದ ಜಯದೇವ. ಆದರೆ ಆ ವಿಷಯವನ್ನು ಇವ ರಿಬ್ಬರ ಮುಂದೆ ಹೇಳುವುದು ಸಾಧ್ಯವಿತ್ತೆ?

ಆನಂದವಿಲಾಸ ಆ ಮಾತುಗಳಿಗೆಲ್ಲ ಅಲ್ಪವಿರಾಮ ಹಾಕಿತು. ವೆಂಕಟರಾಯರ ಮಾತಿನ ರೀತಿ, ಹಾವಭಾವ, ಗಟ್ಟಿ ಸ್ವರ ಅಲ್ಲಿದ್ದ ಎಲ್ಲರ ಗಮನವನ್ನೂ ಸೆಳೆಯದಿರಲಿಲ್ಲ. ಇವರು ಹೊಸ ಮುಖ್ಯೋಪಾಧ್ಯಾಯರು— ಎಂದು ಮೊದಲೇ ನಂಜುಂಡಯ್ಯ ಘೋಷಿಸುತ್ತ ಬರದಿದ್ದರೂ ರಂಗರಾಯ ರಿಗೆ ವರ್ಗವಾಯಿತೆಂಬ ವಿಷಯವನ್ನು ಬಾರಿಬಾರಿಗೂ ಹೇಳುತ್ತ ಬಂದರು.

ಕಾಫಿ ಕುಡಿದು ಹೊರಬೀಳುತಿದ್ದಾಗ ವೆಂಕಟರಾಯರೆಂದರು:

"ರಂಗರಾವ್ ಇನ್ನೂ ಒಂದೆರಡು ದಿನ ಇಲ್ಲಿ ನಿಂತರೂ ನಿಲ್ಲಬಹುದು. ಹಾಗೇನಾದರೂ ಆತ ಮಾಡಿದ್ರೆ ನಾನು ವರದಿ ಮಾಡ್ಬೇಕಾಗುತ್ತೆ. ಅಲ್ದೆ ಆತ ಇಲ್ಲಿಂದ ಹೊರಡೋಕ್ಮುಂಚೆ ಯಾರು ಯಾರನ್ನು ನೋಡ್ತಾನೆ ಏನೇನು ಮಾಡ್ತಾನೇಂತ ಸ್ವಲ್ಪ ತಿಳಕೋಬೇಕಲ್ಲ."

"ಅದೇನು ದೊಡ್ಡ ಕೆಲಸ? ನನ್ನ ತಮ್ಮ ವಿರೂಪಾಕ್ಷನಿಗೆ ಹೇಳಿದ್ರೆ, ರಂಗರಾವ್ ಈ ಊರು ಬಿಡೋವರೆಗೂ ಆತನ ಹಿಂದೇನೇ ಇರ್‍ತಾನೆ."

ಯಾವ ಯೋಚನೆಯೂ ಇಲ್ಲದೆ ಹೇಗೆ ಹೇಳಿದರು ನಂಜುಂಡಯ್ಯ! ಮುಗ್ಧ ಮನಸಿನ ವಿರೂಪಾಕ್ಷ ಇನ್ನು ವಿದ್ಯಾಗುರುವನ್ನೇ ಹಿಂಬಾಲಿಸುವ ಗೂಢಚಾರನಾಗಬೇಕು! ಆ ರೀತಿ ಕಲುಷಿತವಾಗಿಯೆ ಬೆಳೆಯುವ ಆ ಬಳ್ಳಿ ಹೆಮ್ಮರವಾದಾಗ ಹೇಗಿರಬೇಡ!

"ಸರಿ ಹಾಗಾದರೆ. ನಾವು ಇನ್ನು ಶಂಕರಪ್ಪನವರಲ್ಲಿಗೆ ಹೋಗೋಣವೊ ?"

ನಂಜುಂಡಯ್ಯ ಜಯದೇವನ ಮುಖ ನೋಡಿದರು. ಆತ ಶಂಕರಪ್ಪನವರ ಮನೆಗೆ ಬರುವುದು ಅವರಿಗೆ ಇಷ್ಟವಿರಲಿಲ್ಲ. ಜಯದೇವನಿಗೂ ಇಷ್ಟವಿರಲಿಲ್ಲ. ಜಯದೇವನ ವಿಚಿತ್ರ ವ್ಯಕ್ತಿತ್ವದ ವಿಷಯವಾಗಿ ವೆಂಕಟರಾಯರಿಗೆ ತಿಳಿಯ ಹೇಳುವುದೂ ಅಗತ್ಯವೆಂದು ನಂಜುಂಡಯ್ಯ ಭಾವಿಸಿದ್ದರು. ಇವರಿಬ್ಬರಿಂದ ಸದ್ಯಃ ಬೇರೆಯಾಗಿ ರಂಗರಾಯರನ್ನು ನೋಡಹೋಗಬೇಕೆಂಬುದು ಜಯದೇವನ ಯೋಚನೆಯಾಗಿತ್ತು.

"ಜಯದೇವ, ನೀವೊಂದು ಉಪಕಾರ ಮಾಡಿ. ನಾವಿಬ್ರೂ ಶಂಕರಪ್ಪನವರ ಮನೆಗೆ ಹೋಗ್ತೀವಿ. ನೀವು ಸ್ಕೂಲ್ನಿಂದ ವೆಂಕಟರಾಯರ ಬೆಡ್ಡಿಂಗು ಸೂಟ್ ಕೇಸು ಅದೇನೇನಿದೆಯೋ ಅದೆಲ್ಲಾ ಕಳಿಸ್ಕೊಡಿ. ನಮ್ಮ ವಿದ್ಯಾರ್ಥಿಗಳು ಯಾರಾದರೂ ಸಿಕ್ಕಿದರೆ ಸರಿ. ಇಲ್ದೇ ಹೋದ್ರೆ ಯಾವನಾದರೂ ಕೂಲಿ ಕೈಲಿ ಕೊಟ್ಟು ಕಳಿಸಿ."

...ಕೂಲಿಯ ಕೈಯಲ್ಲಿ ಕಳುಹಿಸುವ ಮಾತಿರಲಿಲ್ಲ. ಸ್ವತಃ ಜಯದೇವನೇ ಹೊರಿಸಿಕೊಂಡು ಬರಬೇಕು. ಹಾಗೆ ತಂದರೆ ದುಡ್ಡು ಕೊಡುವ ಪ್ರಶ್ನೆ...

ಸೂಕ್ಷ್ಮಮತಿಗಳಾಗಿದ್ದರು ವೆಂಕಟರಾಯರು.

"ಅದೊಂದೂ ಬೇಡ ಮಿ. ನಂಜುಂಡಯ್ಯ, ಹೀಗ್ಮಾಡೋಣ."

"ಏನು ಹೇಳಿ ?"

"ನೀವು ಸ್ಕೂಲ್ನಲ್ಲೇ ಇರ್ತೀರಿ ಅಲ್ವೇನಪ್ಪ ಜಯದೇವ್ ?"

ಉತ್ತರ ತಡವರಿಸಿದಂತಾದರೂ ನಿಮಿಷಾರ್ಧದಲ್ಲೆ ಸುಧಾರಿಸಿಕೊಂಡು ಜಯದೇವ ಗಟ್ಟಿಯಾಗಿಯೇ ಹೇಳಿದ :

"ಇರ್ತೀನಿ ಸಾರ್."

"ಹಾಗಾದ್ರೆ, ಶಂಕರಪ್ಪನವರ ಮನೆಯಿಂದ ಅವರ ಆಳನ್ನ ಕಳಿಸ್ಕೊಡೋಣ. ಆಗ್ದೇ ಮಿ. ನಂಜುಂಡಯ್ಯ ?"

"ಓಹೋ. ಹಾಗೇ ಆಗಲಿ."

ಜಯದೇವ ಅವರಿಬ್ಬರನ್ನೂ ಅತ್ತ ಕಳುಹಿಸಿ, ತಾನು ಶಾಲೆಯತ್ತ ನಡೆದ. ಕಾಲುಗಳು ಪ್ರಯಾಸಪಟ್ಟು ದೇಹವನ್ನು ಒಯ್ಯುತಿದ್ದಂತೆ ತೋರಿತು.

...ಶಂಕರಪ್ಪನವರ ಆತಿಥ್ಯ. ತಾನು ಬಂದ ಆರಂಭದಲ್ಲಿ ಅಲ್ಲಿ ಕೊಠಡಿ ದೊರೆಯುವ ಮಾತು ಬಂದಿರಲಿಲ್ಲ. ಆದರೆ ಈ ಮುಖ್ಯೋಪಾಧ್ಯಾಯರಿಗೆ ಉಚಿತ ಕೊಠಡಿ, ಪಕ್ಕದ ಬ್ರಾಹ್ಮಣರ ಮನೆಯಲ್ಲಿ ಊಟ...ತನಗೆ ಜಾತಿಯಲ್ಲಿ ನಂಬಿಕೆಯಿಲ್ಲವೆಂದುದು ಪ್ರಾಯಶಃ ಅವರಿಗೆ ರುಚಿಸಲಿಲ್ಲವೇನೊ! ಹೀಗಾಗಿ ತಾನು ಯಾರಿಗೂ ಬೇಡದವನು !...

...ಇನ್ನು ಈ ಶಾಲೆಯಲ್ಲೂ ವಸತಿ ಇರುವಂತಿಲ್ಲ. ತಾನೂ ಬೇರೆ ಕೊಠಡಿ ಹುಡುಕಬೇಕು...

ಶಾಲೆ ಸೇರಿದ ಜಯದೇವ ಬಾವಿಯಿಂದ ಒಂದು ಕೊಡ ನೀರು ಸೇದಿ ತಂದು, ಉರಿಯುತಿದ್ದ ಕಣ್ಣುಗಳಿಗೆ ತಣ್ಣೀರು ಹನಿಸಿದ. ಹೃದಯ ತಣ್ಣಗಾಗುವುದೇನೋ ನೋಡೋಣವೆಂದು ಒಂದು ಲೋಟ ನೀರು ಕುಡಿದ. ಆನಂದ ವಿಲಾಸದ ದೋಸೆ ತಿಂದು ಹೊಟ್ಟೆ ತುಂಬಿದ್ದ ಹಾಗೆ ತೋರಿತು. 'ಹಸಿವೆಯೇ ಇಲ್ಲ, ಊಟ ಮಾಡದೆ ಇರೋದೇ ಮೇಲು' ಎಂದುಕೊಂಡ. ಬೆಂಗಳೂರಲ್ಲಾಗಿದ್ದರೆ ಹಲವು ಸಾರಿ ವೇಣು-ಸುನಂದೆಯರ ತಾಯಿ ಕೇಳುತ್ತಿದ್ದರು: 'ಊಟ ಆಯ್ತೇ ಜಯಣ್ಣ ?' ಎಂದು. 'ಹಸಿವಿಲ್ಲ' ಎನ್ನುತಿದ್ದ ಜಯದೇವ. ಆದರೆ ಅವರು, 'ಬೆಳೆಯೋ ಹುಡುಗ, ಊಟ ಮಾಡೊಲ್ಲ. -ಹಸಿವಿಲ್ಲ ಅಂದ್ರೇನೊ ?' ಎಂದು ಛೀಮಾರಿ ಹಾಕಿ ಸಾರನ್ನ ಮೊಸರನ್ನ ಕಲಸಿಕೊಡುತಿದ್ದರು...ಇಲ್ಲಿ ಅಂತಹ ಯಾವ 'ತೊಂದರೆ'ಯೂ ಇರಲಿಲ್ಲ

ಕತ್ತಲಾಯಿತೆಂದು ಜಯದೇವ ಬೆಡ್ ಲ್ಯಾಂಪು ಉರಿಸಿದ. 'ಈ ಹೊಗೆ ಕಣ್ಣಿಗೆ ಕೆಟ್ಟದ್ದು. ಬೇರೊಂದು ಕಂದೀಲು ಕೊಳ್ಳಬೇಕು'-ಎಂದು ತೀರ್ಮಾನಿಸಿದ.

ಶಂಕರಪ್ಪನ ಮನೆಯಿಂದ ಆಳು ಬರಲೇ ಇಲ್ಲ. ಬೇಕು ಬೇಕೆಂದೇ, ತಾನು ಎಲ್ಲಿಗೂ— ಅಂದರೆ ರಂಗರಾಯರಲ್ಲಿಗೆ-ಹೋಗಬಾರದೆಂದೇ, ಆಳನ್ನು ಕಳಿಸಲು ತಡಮಾಡುತ್ತಿರುವರೇನೋ ಎಂದು ಜಯದೇವ ಶಂಕಿಸಿದ. ಮರುಕ್ಷಣವೆ, ಇಷ್ಟೆಲ್ಲಾ ಆಳವಾಗಿ ಯೋಚಿಸಿ ಊಹಾಪೋಹದ ಸಹಸ್ರ ಮುಳ್ಳುಗಳನ್ನು ತಾನೆ ನಿರ್ಮಿಸಿಕೊಳ್ಳಬಾರದು-ಎಂದು ತನ್ನನ್ನು ತಾನೇ ಟೀಕಿಸಿಕೊಂಡ.

ಅಷ್ಟರಲ್ಲೆ ಹೊರಗೆ ಕರೆದ ಸದ್ದಾಯಿತು:

"ಬುದ್ಧೀ..."

ಯಾರು ಎಂದು ಕೇಳಬೇಕಾದ ಅಗತ್ಯವಿರಲಿಲ್ಲ. ಜಯದೇವ ಹೊರ ಬರುತ್ತಲೆ ಬಂದವನೆಂದ:

"ಮೇಷ್ಟ್ರು ಕಳಿಸವ್ರೆ."

ಆಫೀಸು ಕೊಠಡಿಯನ್ನು ತೆರೆದು ವೆಂಕಟರಾಯರ ಸಾಮಾನುಗಳನ್ನು ಹೊರತಂದು ಅಷ್ಟನ್ನೂ ಆಳು ತಲೆಯ ಮೇಲಿರಿಸಿಕೊಳ್ಳಲು ಜಯದೇವ ನೆರವಾದ.

ಆ ಬಳಿಕ ಕೆಲವು ನಿಮಿಷಗಳಾದ ಮೇಲೆ ತನ್ನ ಹಾಸಿಗೆಯನ್ನು ಹಾಸಿಟ್ಟು, ದೀಪವನ್ನು ಚಿಕ್ಕದಾಗಿ ಉರಿಯಗೊಟ್ಟು, ಬಾಗಿಲಿಗೆ ಬೀಗ ತಗಲಿಸಿ ಜಯದೇವ ಬೇಗ ಬೇಗನೆ ರಂಗರಾಯರ ಮನೆಗೆ ನಡೆದ.

× × × ×

ರಾತ್ರೆ ಅಷ್ಟು ಹೊತ್ತಾದಾಗ, ಇನ್ನು ಜಯದೇವ ಬರುವುದಿಲ್ಲವೆಂದೇ ರಂಗರಾಯರು ಭಾವಿಸಿದ್ದರು.

"ಬರ್‍ತಾನೇಂತ ಅಡುಗೆ ಮಾಡಿದ್ದು ವ್ಯರ್ಥವಾಯ್ತು" ಎಂದು ಸಾವಿತ್ರಮ್ಮ ಗೊಣಗಿದರು.

ಆ ನಷ್ಟದ ಯೋಚನೆಗಿಂತಲೂ ತಮ್ಮನ್ನು ಕಾಣಲು ಜಯದೇವ ಹಿಂದೇಟು ಹಾಕುತ್ತಿರಬಹುದೆಂಬ ವಿಚಾರ ರಂಗರಾಯರನ್ನು ಸಂಕಟಕ್ಕೆ ಗುರಿಮಾಡಿತು.

ಆದರೆ ಅಂಗಳದಲ್ಲಿ ನಿಂತು ಜಯದೇವ "ಸಾರ್" ಎಂದಾಗ, ರಂಗರಾಯರು ಉತ್ಸಾಹದಿಂದೆದ್ದು ಬಾಗಿಲು ತೆರೆದರು.

"ಬನ್ನಿ ಜಯದೇವ. ನೀವು ಬರೋದೇ ಇಲ್ವೇನೋಂತಿದ್ದೆ."

"ಯಾಕ್ಸಾರ್ ? ಬರ್‍ತೀನೀಂತ ಆಗ್ಲೇ ಹೇಳ್ಲಿಲ್ವೆ ? ಅವರಿಬ್ಬರನ್ನೂ ಕಳಿಸ್ಕೊಡೋದು ತಡವಾಯ್ತು."

ಮನೆಯ ಗೋಡೆಯಿಂದ ಪಟಗಳು ಮಾಯವಾಗಿದ್ದುವು; ಕಿತ್ತು ಬಂದಿದ್ದುವು ಮೊಳೆಗಳು...

"ಇದೇನ್ಸಾರ್ ? ಯಾವತ್ತು ಹೊರಡ್ತೀರಾ ?"

"ನಾಳೆ ಬೆಳಗ್ಗೆ ಜಯದೇವ."

'ನಾಳೇನೆ!"

"ಹೌದು ; ಎಂಟು ಗಂಟೆಗೆ ಚೆಂಪೂರು ಬಸ್ಸು ಬರುತ್ತೆ."

"ಕೊಡಗನೂರಿಗೇ ನೇರವಾಗಿ ಹೋಗ್ತೀರಾ ?"

"ಇಲ್ಲವಪ್ಪ ಮನೆಯಾಕೇನ ಬೆಂಗಳೂರಲ್ಲಿ ಮಗಳ್ಮನೇಲಿ ಬಿಟ್ಬಿಟ್ಟು ನಾನೊಬ್ಬನೇ ಕೊಡಗನೂರಿಗೆ ಹೊರಡ್ತೀನಿ...ಹೊಸ ಊರು ಸೇರೋದಕ್ಕೆ ಇನ್ನೂ ಒಂದುವಾರ ಅವಕಾಶವಿದೆಯಲ್ಲ."

ಮೌನ ಸ್ವಲ್ಪ ಹೊತ್ತು ನೆಲೆಸಿತು.

"ನಿಮ್ಮ ಮನಸ್ಸಿಗೆ ತುಂಬಾ ಬೇಜಾರು ಆಗಿರ್ಬೇಕಲ್ವೆ ಸಾರ್ ?"

"ಯಾಕೆ ಜಯದೇವ ? ಹಿಂದೇನೂ ಎರಡು ಮೂರು ಸಲ ಉಗುಳು ನುಂಗಿದೇನೆ. ಈ ವಯಸ್ನಲ್ಲಿ ಈಗ ಹೀಗಾಗ್ಬಾರ್ದಾಗಿತ್ತು-ಅಷ್ಟೆ... ಇನ್ನೂ ಒಂದೂಂತಂದ್ರೆ, ಪ್ರತಿ ಸಾರೆಯೂ ನನಗೇ ಅನ್ಯಾಯ ಆಗ್ತಾ ಬಂದಿದೆ."

"ನ್ಯಾಯ ಅನ್ನೋ ಪದಕ್ಕೆ ಈಗ ಅರ್ಥವುಂಟೆ ಸಾರ್ ?"

ರಂಗರಾಯರು ನಗಲೆತ್ನಿಸಿದರು. ನ್ಯಾಯದ ಪದ ಹೊಸ ವಿಚಾರಕ್ಕೆ ಆಸ್ಪದ ಕೊಟ್ಟಂತಾಗಿ ಜಯದೇವನೆಂದ :

"ನೀವು ಸುಮ್ನಿರೋದು ಸರಿಯಲ್ಲ ಸಾರ್. ಪ್ರತಿಭಟಿಸ್ಬೇಕು. ಊರಲ್ಲಿ ಒಳ್ಳೆಯವರು ಖಂಡಿತ ಇರ್ತಾರೆ. ವಿದ್ಯಾರ್ಥಿಗಳಿರ್ತಾರೆ."

ರಂಗರಾಯರು ಬಹಳ ಹೊತ್ತು ಉತ್ತರವೀಯಲಿಲ್ಲ. ಅವರ ಹುಬ್ಬು ಗಳು ಯೋಚನೆಯ ಭಾರದಿಂದ ಬಾಗಿದುವು...ಮತ್ತೆ ಅವರು ಉತ್ತರವಿತ್ತಾಗ ಆ ಮಾತಿನಲ್ಲಿ ಕೊನೆಯ ತೀರ್ಮಾನದ ಧ್ವನಿ ಇತ್ತು.

"ಇಲ್ಲ, ಜಯದೇವ್. ಅದು ಅಷ್ಟು ಸುಲಭವಲ್ಲ. ಇಲ್ಲಿ ವಾತಾವರಣ ಕೆಟ್ಟು ಹೋಗಿದೆ. ತತ್ವಕ್ಕಾಗಿ ಹೊಡೆದಾಡೋ ಸಾಮರ್ಥ್ಯವೂ ಈಗ ನನಗಿಲ್ಲ. ಇದ್ದುಕೊಳ್ಳಲಿ ಬಿಡಿ. ನಾನು ಹೊರಟು ಹೋಗೋದ್ರಿಂದ ಕೆಲವರಿಗಾದರೂ ಸುಖವಾಗೋದಿದ್ರೆ—"

"ಅದೇನು ಸುಖವೋ..."

ವೆಂಕಟರಾಯರು ಜಯದೇವನ ದೃಷ್ಟಿಯ ಮುಂದೆ ಸುಳಿದರು. ಅವರ ಆಡಳಿತದಲ್ಲಿ ಶಾಲೆಯ—ವಿದ್ಯಾರ್ಥಿಗಳ—ಅಭಿವೃದ್ಧಿಯಾಗುವ ಚಿತ್ರವನ್ನು ಕಲ್ಪಿಸಿಕೊಳ್ಳಲು ಆತ ಯತ್ನಿಸಿದ. ಆ ಚಿತ್ರ ಸ್ಪಷ್ಟವಾಗಿ ಮೂಡಲೇ ಇಲ್ಲ. ಅದು ಮಸುಕು ಮಸುಕಾಗಿತ್ತು...

ಆ ಸಂಜೆ ವೆಂಕಟರಾಯರು ಮತ್ತು ನಂಜುಂಡಯ್ಯ ಆಡಿಕೊಂಡಿದ್ದ ಮಾತುಗಳೆಲ್ಲ ಜಯದೇವನ ನೆನಪಿಗೆ ಬಂದುವು. ಅಷ್ಟನ್ನೂ ರಂಗರಾಯರಿಗೆ ಹೇಳಿ ಬಿಡೋಣವೇ–ಎನ್ನಿಸಿತು. ಅವರಿಂದೇನೂ ಪ್ರಯೋಜನವಿಲ್ಲ–ಆಗಿರುವ ನೋವನ್ನು ಮತ್ತೂ ಯಾಕೆ ಕೆದಕಬೇಕು—ಎಂದು ಅತ ಸುಮ್ಮನಾದ.

ಸಾವಿತ್ರಮ್ಮ ಬಂದು ಹೇಳಿದರು :

"ಎಷ್ಟೋ ದಿವಸ ಆದ್ಮೇಲೆ ಬಂದಿದೀರಪ್ಪ ಏಳಿ, ಊಟಕ್ಕೇಳಿ. ಆ ಮೇಲೆ ಮಾತಾಡೀರಂತೆ."

ಊಟವಾಯಿತೆಂದು ಸುಳ್ಳಾಡಲು ಬಯಸಿದರೂ ಅದು ಸಾಧ್ಯವಾಗದೆ ಜಯದೇವನೆಂದ:

"ನಂಗೆ ಹಸಿವಿಲ್ಲ ಅಮ್ಮ."

"ಯಾರಾದರೂ ನಗ್ತಾರೆ, ನಿಮ್ಮ ವಯಸ್ನಲ್ಲಿ ಹಾಗಂದ್ರೆ...ಏಳಿ—ಏಳಿ..."

ರಂಗರಾಯರೂ ಹೆಂಡತಿಯ ಮಾತನ್ನು ಹಿತವಚನದೊಡನೆ ಪುಷ್ಟೀಕರಿಸಿದರು:

"ಊಟ ತಿಂಡಿ ಯಾವಾಗಲೂ ಕ್ರಮಬದ್ಧವಾಗಿರ್ಬೇಕು ಜಯದೇವ. ಕಾಹಿಲೆ ಬೀಳ್ಬೇಡೀಪ್ಪಾ."

ಊಟವಾಯಿತು......

ಅನಂತರದ ವಿರಾಮದಲ್ಲಿ ರಂಗರಾಯರೆಂದರು:

"ಉಪಾಧ್ಯಾಯ ವೃತ್ತಿ ಅತ್ಯಂತ ಗೌರವದ್ದು. ಆದರೆ ಇನ್ನೊಮ್ಮೆ ಯುವಕನಾಗಿ ಜೀವನ ಶುರು ಮಾಡೋಕೆ ನನಗೆ ಅವಕಾಶ ಸಿಗ್ತೂಂದ್ರೆ ಖಂಡಿತವಾಗ಼್ೂ ನಾನು ಉಪಧ್ಯಾಯನಾಗೋದಿಲ್ಲ."

ಜಯದೇವನಿಗೆ ಹೃದಯ ಹಿಂಡಿದ ಹಾಗಾಯಿತು:

"ನೀವು ಹಾಗನ್ಬಾರದು...ಈ ರೀತಿ ನೀವಂದ್ರೆ ನನ್ನಂಥ ಯುವಕರು ಯಾಕೆ ವೃತ್ತಿಗೆ ಬಂದಾರು ?"

"ಬರದೆ ಏನ್ಮಾಡ್ತಾರೆ? ಯಾವ ಉದ್ಯೋಗವೂ ಸಿಗ್ದೇ ಇದ್ದಾಗ ಈ ಉದ್ಯೋಗಕ್ಕೆ ಬರ್ತಾರೆ. ದೊಡ್ಡ ಆದರ್ಶ ಇಟ್ಕೊಂಡು ಬರೋ ಜನರೂ ಕೆಲವರು ಇರ್ಬಹುದು. ಇಲ್ಲಾಂತ ನಾನು ಅನ್ನೋದಿಲ್ಲ. ಆದರೆ ಅವರೆಲ್ಲ ಯಾವ ಭ್ರಮೇನೂ ಇಟ್ಕೊಳ್ಳದೇನೇ ಬರೋದು ಮೇಲು."

ಜಯದೇವನೊ — ಭ್ರಮೆ ಇಟ್ಟುಕೊಂಡೇ ಬಂದಿದ್ದ. ವಿದ್ಯಾ ಸರಸ್ವತಿಯ ಮಂದಿರಕ್ಕೇ ಬಂದಿದ್ದ, ಅನನ್ಯ ಭಕ್ತಿಯಿಂದ. ಆದರೆ ಬಾಗಿಲು ಎಂದು ಭಾವಿಸಿ ಒಳನುಗ್ಗಿದಲ್ಲೇ ಬಂಡೆಕಲ್ಲು ಮೆಲ್ಲನೆ ಮೂಗಿಗೆ ಸೋಂಕಿತ್ತು....

"ಹಾಗಾದ್ರೆ ಇದಕ್ಕೆ ಪರಿಹಾರ ಇಲ್ವೆ ಸಾರ್ ?"

"ಇದ್ದೀತು ಜಯದೇವ. ಆದರೆ ನನಗಂತೂ ತಿಳೀದು."

...ಹಾಗೆ ಮಾತು ಮುಂದುವರಿಯಿತು.

ಸಾಮಾನು ಕಟ್ಟಲು ಜಯದೇವ ನೆರವಾದ. ಆ ಮನೆಯಲ್ಲಿ ಎಷ್ಟೊಂದು ಕಡಮೆ ಸಾಮಾನುಗಳಿದ್ದುವು !

ಸಾವಿತ್ರಮ್ಮ ನಗುತ್ತ ಅಂದರು:

"ಏನಪ್ಪಾ, ನೀವು ಮದ್ವೆ ಮಾಡ್ಕೊಂಡು ಸಂಸಾರ ಹೂಡುವಾಗ ಎಷ್ಟು ಕಮ್ಮಿ ಸಾಧ್ಯವೋ ಅಷ್ಟು ಕಮ್ಮಿ ಸಾಮಾನು ಇಟ್ಕೊಳ್ಳಿ. ಆಜ್ಞೆ ಬಂದ ತಕ್ಷಣ ಹೊರಡೋ ಹಾಗಿರ್ಬೇಕು !"

...ನಡುರಾತ್ರಿಯಾಗಿತ್ತು ಜಯದೇವ ಶಾಲೆಯತ್ತ ಹೊರಟಾಗ.

ಬೀದಿಯಲ್ಲಿ ನಿಂತು ರಂಗರಾಯರೆಂದರು:

"ನಿಮ್ಮಿಂದ ತುಂಬಾ ಉಪಕಾರವಾಯ್ತು ಜಯದೇವ. ನೀವು ಇನ್ನೊಂದು ಮಾಡಬೇಕಾದ್ದು ಮಿಕ್ಕಿದೆ."

"ಏನು ಹೇಳಿ."

"ನನ್ನದೊಂದು ಮಾತು ನಡೆಸಿಕೊಡ್ಬೇಕು. ನಾಳೆ ಬೆಳಗ್ಗೆ ನೀವು ಬಸ್ ಸ್ಟ್ಯಾಂಡಿಗೆ ಬರಕೂಡ್ದು ! ನಿಮ್ಮ ಹಿತಕ್ಕಾಗಿಯೇ ಹೇಳ್ತಿದೀನಿ."

ಜಯದೇವ ಯಾವ ಉತ್ತರವನ್ನೂ ಕೊಡದೆ ನಡೆದ.

...................

ತಡವಾಗಿ ಮಲಗಿದ್ದರೂ ಬೆಳಗ್ಗೆ ಜಯದೇವನಿಗೆ ಬೇಗನೆ ಎಚ್ಚರ ವಾಯಿತು. ಪ್ರಾತರ್ವಿಧಿಗಳನ್ನಾತ ಮುಗಿಸಿದ. ಕಾಫಿಗೆಂದು ಆನಂದ ವಿಲಾಸಕ್ಕೆ ಹೋಗುವುದರ ಬದಲು, ಬಸ್ ನಿಲ್ದಾಣಕ್ಕೇ ನಡೆದರಾಯಿತೆಂದು ಕೊಂಡ.

ಆತ ನಿಲ್ದಾಣಕ್ಕೆ ಬಂದಾಗ ಅದು ನಿರ್ಜನವಾಗಿತ್ತು.

ಒಳಗೆ ಕುಳಿತು ಕಾಫಿ ಕೇಳಿದಾಗ ಒಬ್ಬ ಹುಡುಗನೆಂದ:

"ನಮಸ್ಕಾರ ಸಾರ್!"

ತಾನು ಬಂದ ದಿನ ತನ್ನನ್ನು 'ನೀವು ಮೇಷ್ಟ್ರಲ್ವ ಸಾರ್, ಎಂದು ಕೇಳಿದ್ದ ಹುಡುಗ.

"ನಮಸ್ಕಾರವಪ್ಪ. ಚೆನ್ನಾಗಿದೀಯಾ ?"

"ಹೂಂ ಸಾರ್. ನೀವು ಆ ಮೇಲೆ ಈ ಹೋಟ್ಲಿಗೆ ಬರ್ಲೇ ಇಲ್ಲ."

"ಊರಲ್ಲಿ ಇರೋವರಿಗೆ ಊರಿನ ಹೋಟ್ಲು. ಬಸ್ ಪ್ರಯಾಣ ಮಾಡೋ ಜನಕ್ಕೆ ಮಾತ್ರ ಬಸ್ ಸ್ಟ್ಯಾಂಡ್ ಹೋಟ್ಲು. ಅಲ್ವಾ?"

"ಹಾಗಾದ್ರೆ ಇವತ್ತು ಬಂದಿದೀರಲ್ಲ ? ಊರಿಗೆ ಹೋಗ್ತೀರಾ ಸಾರ್ ?"

"ನಾನಲ್ಲ; ನಮ್ಮ ಸ್ನೇಹಿತರು ಹೋಗ್ತಾರೆ."

ಒಡನೆಯೇ, ಯಾರು ಹೋಗುವರೆಂದು ಹೇಳುವ ಮನಸ್ಸಾಯಿತು ಜಯದೇವನಿಗೆ. ರಂಗರಾಯರು ಹೊರಟು ಹೋಗುವ ವಾರ್ತೆ ಆ ಹುಡುಗನ ಮೇಲೇನು ಪರಿಣಾಮ ಮಾಡುವುದೋ ಎಂಬುದನ್ನು ತಿಳಿಯುವ ಕುತೂಹಲವಾಯಿತು.

"ನಿನಗೆ ಗೊತ್ತೇನಪ್ಪ ? ಹೆಡ್‌ಮೇಷ್ಟ್ರು ರಂಗರಾಯರಿಗೆ ವರ್ಗ ವಾಯ್ತು. ಈಗ ಹೋಗ್ತಾರೆ."

"ಓ ! ಅವರು ತುಂಬಾ ಒಳ್ಳೆಯವರು..."

"ನಿನಗೆ ಹ್ಯಾಗ್ಗೊತ್ತು ?"

"ಮನುಷ್ಯರ್ನ ನೋಡಿದ್ರೆ ತಿಳಿಯೋಲ್ವೆ ಸಾರ್ ?"

"ಹೂಂ ?"

"ನಾನು ಸ್ಕೂಲ್ಗೆ ಹೋಗಿದ್ದಿದ್ರೆ ಅವರು ನನಗೂ ಹೆಡ್ಮೇಷ್ಟ್ರು ಆಗ್ತಿದ್ರು..."

ಅಲ್ಲಿಗೇ ಮಾತು ನಿಲ್ಲಿಸಿ ಜಯದೇವ ಉಪ್ಪಿಟ್ಟು ತಿಂದು ಕಾಫಿ ಕುಡಿದ.

ಸ್ವಲ್ಪ ಹೊತ್ತಿನಲ್ಲೆ ಸಾಮಾನುಗಳನ್ನು ಹೊರಿಸಿಕೊಂಡು ರಂಗ ರಾಯರು ಸಪತ್ನೀಕರಾಗಿ ಬಂದರು. ಅವರನ್ನು ಕಾಫಿಗೆ ಕರೆಯುವುದಕ್ಕೂ ಬಿಡುವಿಲ್ಲದ ಹಾಗೆ ಚಿಂದೂರು ಬಸ್ಸು ಬಂತು.

ರಂಗರಾಯರು ಮಾತನಾಡಲೇ ಇಲ್ಲ. ಸಾವಿತ್ರಮ್ಮ ಮಾತ್ರ "ಹೋಗಿ ಬರ್ತೀವಪ್ಪಾ" ಎಂದರು.

ಉದ್ವಿಗ್ನಗೊಂಡಿದ್ದ ಭಾವನೆಗಳನ್ನು ಅದುಮಿ ಹಿಡಿಯುತ್ತಾ ರಂಗ ರಾಯರು ಜಯದೇವನ ಕೈ ಕುಲುಕಿದರು.

ಜಯದೇವನೆಂದ :

"ಆಗಾಗ್ಗೆ ಕಾಗ್ದ ಬರೀರಿ ಸಾರ್."

"ಹೂಂ ಜಯದೇವ."

ಬಸ್ಸು ಧೂಳೆಬ್ಬಿಸಿ ಹೊರಟು ಹೋಯಿತು.

ಆ ವರೆಗೂ ಗೌರವದಿಂದ ರಂಗರಾಯರನ್ನೂ ಬಸ್ಸನ್ನೂ ದೂರ ದಿಂದಲೇ ನೋಡುತಿದ್ದ ಹುಡುಗ ಜಯದೇವನ ಬಳಿಗೆ ಬಂದು ಕೇಳಿದ :

"ಅದ್ಯಾಕ್ಸಾರ್ ಕಳಿಸ್ಕೊಡೋಕೆ ಬೇರೆ ಯಾರೂ ಬರ್ಲಿಲ್ಲ ?"

"ಯಾರಿಗೂ ಗೊತ್ತಿರ್ಲಿಲ್ಲ. ಆಕಸ್ಮಾತ್ ಇವತ್ತೇ ಹೊರಟ್ಬಿಟ್ರು...."

## ೧೦

ರಂಗರಾಯರು ಆ ಬೆಳಗ್ಗೆಯೇ ಹೊರಟು ಹೋದ ವಿಷಯವೂ ಜಯದೇವ ಬಸ್ ನಿಲ್ದಾಣದಲ್ಲಿ ಅವರನ್ನು ಬೀಳ್ಕೊಟ್ಟ ವಿಷಯವೂ ವೆಂಕಟರಾಯರಿಗಾಗಲೀ ನಂಜುಂಡಯ್ಯನಿಗಾಗಲೀ ತಿಳಿದು ಬರುವುದರಲ್ಲಿ ಸಂದೇಹವಿರಲಿಲ್ಲ. ಆದರೆ ಜಯದೇವ ಮಾತ್ರ ತಾನಾಗಿಯೇ ಆ ಮಾತನ್ನೆತ್ತಲಿಲ್ಲ.

ವಿರೂಪಾಕ್ಷ ಏದುತ್ತ ಬಂದು ಒಬ್ಬರೇ ಇದ್ದ ವೆಂಕಟರಾಯರ ಮುಂದೆ ನಿಂತು ವರದಿಯೊಪ್ಪಿಸಿದ:

"ಹೆಡ್‌ಮೇಷ್ಟ್ರು ಇವತ್ತು ಬೆಳಗ್ಗೆನೇ ಬಸ್ನಲ್ಲಿ ಹೋದ್ರಂತೆ ಸಾರ್."

ಮುಖ್ಯೋಪಾಧ್ಯಾಯರಿಗೆ ಎಲ್ಲಿಲ್ಲದ ಸಿಟ್ಟು ಬಂತು.

"ಯಾವ ಹೆಡ್ಮೇಷ್ಟ್ರು ?"

ವಿರೂಪಾಕ್ಷ ಕಕ್ಕಾವಿಕ್ಕಿಯಾದ.

"ಹೆಡ್ಮೇಷ್ಟ್ರು ಸಾರ್."

ವೆಂಕಟರಾಯರು ಮುಷ್ಟಿ ಬಿಗಿದು ಮೇಜಿನ ಮೇಲೆ ಗುದ್ದಿದರು.

"ಇಲ್ಲಿ ನಾನು ಹೆಡ್ಮೇಷ್ಟ್ರು, ತಿಳೀತೇನೊ ?"

ವಿರೂಪಾಕ್ಷನಿಗೆ ತನ್ನ ತಪ್ಪು ತಿಳಿಯಿತು. ನಿಸ್ತೇಜವಾಯಿತು ಆತನ ಮುಖ. ಹೊಸ ಮುಖ್ಯೋಪಾಧ್ಯಾಯರ ಕೆಂಗಣ್ಣು ನೋಡಿ ಭಯವಾಯಿತು.

"ಯಾರು ನೀನು ? ನಿನ್ನ ಹೆಸರೇನು ?"

"ವಿರೂಪಾಕ್ಷ ಸಾರ್. ನಂಜುಂಡಯ್ಯ ಮೇಷ್ಟ್ರು ತಮ್ಮ ಸಾರ್."

ಒಮ್ಮೆಲೆ, ವೆಂಕಟರಾಯರ ಕೋಪ ಇಳಿದು ಹೋಯಿತು. ಅವರು ಮುಗುಳ್ನಗಲೆತ್ನಿಸುತ್ತಾ ಕೈ ಬೀಸಿ ಅಂದರು :

"ಕ್ಲಾಸಿಗೆ ಹೋಗು."

ರಂಗರಾಯರು ಹೊರಟು ಹೋದ ವಿಷಯ ತಿಳಿದಾಗ ನಂಜುಂಡಯ್ಯ, ಜಯದೇವನನ್ನು ಕೇಳಿದರು :

"ಸುದ್ದಿ ಕೇಳಿದಿರಾ ಜಯದೇವ ? —ರಂಗರಾಯರು ಇವತ್ತು ಬೆಳಗ್ಗೆನೇ ಹೋದರಂತೆ."

"ಹುಂ. ಬಸ್ ನಿಲ್ದಾಣದಲ್ಲಿ ನನಗೆ ನೋಡೋಕೆ ಸಿಕ್ಕಿದ್ರು."

"ಹೌದೆ ? ಅವರು ಹೋಗೋದು ಗೊತ್ತಿತ್ತೇನು ನಿಮಗೆ ?"

ಗೊತ್ತಿತ್ತು—ಎನ್ನಬೇಕೆಂದು ತೋರಿತು ಜಯದೇವನಿಗೆ. ಹಾಗೆಯೇ ಹೇಳೆಂದು ಮನಸಿನ ಒಂದು ಭಾಗ ಒತ್ತಾಯಿಸಿತು. ಮನಸಿನ ಇನ್ನೊಂದು ಭಾಗ, ಸುಳ್ಳು ಹೇಳಿದರೂ ತಪ್ಪಿಲ್ಲ-ಇಲ್ಲವೆನ್ನು, ಎಂದು ಆಗ್ರಹ ತೊಟ್ಟಿತು.

ಬಲವಾಗಿತ್ತು ಆ ಆಗ್ರಹ.

"ಇಲ್ಲ ! ಕಾಫಿಗೇಂತ ಬೆಳಿಗ್ಗೆ ಹೋದವನಿಗೆ ಅಕಸ್ಮಾತ್ ಸಿಕ್ಕಿದರು."

"ಓ !"

ನಂಜುಂಡಯ್ಯ, ಪರೀಕ್ಷಿಸುವ ದೃಷ್ಟಿಯಿಂದ ಜಯದೇವನನ್ನು ನೋಡಿದರು. ಆ ಮಾತನ್ನು ಸತ್ಯವೆಂದು ನಂಬಲು ಅವರು ಸಿದ್ಧವಿರಲಿಲ್ಲ. ಅಂತೂ ಈ ಜಯದೇವ ಕಟ್ಟುನಿಟ್ಟಿನ ಬ್ರಾಹ್ಮಣನೇ ಸರಿ, ರಂಗರಾಯನ ಪಕ್ಷಪಾತಿಯೇ,—ಎಂದು ಅವರಿಗೆ ತೋರಿತು. ಮರುಕ್ಷಣವೇ ವೆಂಕಟರಾಯನೂ ಬ್ರಾಹ್ಮಣನೇ, ಆತನ ಬುದ್ಧಿ ಯಾಕಿರಬಾರದು ಈ ಜಯದೇವನಿಗೆ? ಅನಿಸಿತು.

ವೆಂಕಟರಾಯರು ಮೂದಲಿಸುತ್ತ ಅಂದರು :

"ಸಭ್ಯ ವರ್ತನೇನೂ ತಿಳೀದೇನೋ ಆತನಿಗೆ? ಬಂದು ಹೇಳ್ಬಿಟ್ಟಾದ್ರೂ ಹೋಗ್ಬೇಕೋ ಬೇಡ್ವೊ?"

ರಂಗರಾಯರ ನಿಂದನೆಯನ್ನು ಸಹಿಸಲಾರದೆ ಜಯದೇವನೆಂದ :

"ನಿಮಗೆ ಹೇಳೋಕೆ ಮರೆತ್ಹೋಯ್ತು. ನಿಮಗಿಬ್ಬರಿಗೂ ನಮಸ್ಕಾರ ತಿಳಿಸ್ಬೇಕೂಂತಂದ್ರು."

"ಹಾಗೊ ! ಹುಂ...."

ತಾನು ಮತ್ತು ಅವರಿಬ್ಬರ ನಡುವೆ ತನಗರಿಯದೆಯೇ ಅಡ್ಡ ಗೋಡೆಯೊಂದು ಎದ್ದಿತೆಂಬುದು ಜಯದೇವನಿಗೆ ಸ್ಪಷ್ಟವಾಯಿತು. ಅದನ್ನು ತಪ್ಪಿಸಬೇಕೆಂದು ಆತ ಶ್ರಮಿಸಿದ್ದ. ಆದರೆ ಅದು ಅನಿವಾರ್ಯವಾಗಿತ್ತು.

ಇನ್ನು ಆದುದಾಗಲಿ—ಎಂದುಕೊಂಡ ಜಯದೇವ. ತನ್ನ ಮನಸ್ಸಾಕ್ಷಿಗೆ ಅನ್ಯಾಯವಾಗುವಂತೆ ವರ್ತಿಸಲು ಆತ ಇಚ್ಛಿಸಲಿಲ್ಲ. ಸಾಧ್ಯವಾದಷ್ಟು ಮಟ್ಟಿಗೆ ಆತ್ಮಾಭಿಮಾನವನ್ನು ಉಳಿಸಿಕೊಂಡೇ ಬದುಕಬೇಕೆಂದು ಆತ ಬಯಸಿದ.

ಆದರೆ ಸುಲಭವಾಗಿರಲಿಲ್ಲ ಅಂತಹ ಬದುಕು.

ಹಿಂದಿನ ಮುಖ್ಯೋಪಾಧ್ಯಾಯರು ಅಧೋಗತಿಗೆ ಇಳಿಸಿದ್ದರೆಂದು ಹೇಳಲಾದ ಶಾಲೆಯನ್ನು ಮತ್ತೆ ಊರ್ಜಿತ ಸ್ಥಿತಿಗೆ ತರಲು ಬದ್ಧಕಂಕಣ ರಾದ ವೆಂಕಟರಾಯರು ಸುಧಾರಣೆಗಳನ್ನು ಜಾರಿಗೆ ತರತೊಡಗಿದರು. ಅವರೂ ನಂಜುಂಡಯ್ಯನ ದೃಷ್ಟಿಯಲ್ಲಿ 'ಹಳೆ ಮರ್ಜಿಯ ಹಳೇ ಮೆಟ್ರಿಕ್ಯು ಲೇಟ್.' ತಾವು ಮುಂದೆ ಮುಖ್ಯೋಪಾಧ್ಯಾಯನಾಗಿ ಬರುವುದಕ್ಕೆ ಪೂರ್ವ ಭಾವಿಯಾಗಿ ಸ್ವಲ್ಪ ಕಾಲವಷ್ಟೇ ಇರುವ ಈ ಹಳಬ ಬೇಕಾದ್ದನ್ನು ಮಾಡಿ ಕೊಳ್ಳಲಿ—ಎಂದು ನಂಜುಂಡಯ್ಯ ಸುಮ್ಮನಾದರು.

ವೆಂಕಟರಾಯರ ಸುಧಾರಣೆಯಲ್ಲಿ ಮೊದಲನೆಯದು ಶಾಲೆಯ ಘನತೆ ಯನ್ನುಳಿಸುವ ಕಾರ್ಯಕ್ರಮ. ಜಯದೇವ ಅಲ್ಲಿ ಮಲಗಲೇ ಕೂಡದೆಂಬುದು ವೆಂಕಟರಾಯರ ದೃಢ ಅಭಿಪ್ರಾಯವಾಗಿತ್ತು.

"ಇನ್ನೊಂದು ವಾರದೊಳಗೆ ನೀವು ಬೇರೆ ಕಡೆ ಏರ್ಪಾಡು ಮಾಡಲೇ ಬೇಕು" ಎಂದು ಅವರು ಖಡಾಖಂಡಿತವಾಗಿ ಹೇಳಿಯೇ ಬಿಟ್ಟರು.

ಶಾಲೆಯಲ್ಲಿಯೇ ಇರಿ–ಎಂದು ಹಿಂದೆ ಹೇಳಿದ್ದ ನಂಜುಂಡಯ್ಯ ಈಗ ಮಾತೆತ್ತಲಿಲ್ಲ.

ಜಯದೇವ ನಾಲ್ಕನೆಯ ತರಗತಿಯಲ್ಲಿ ಹುಡುಗರ ನೆರವು ಕೇಳಿದ:

"ಯಾರಾದರೂ ನನಗೊಂದು ಒಳ್ಳೇ ರೂಮು ದೊರಕಿಸಿ ಕೊಡ್ತೀರೇನಪ್ಪ? ಸ್ಕೂಲ್ನಲ್ಲೇ ಇದ್ದು ಬೇಜಾರಾಗಿದೆ."

"ಓ! ಅದಕ್ಕೇನ್ಸಾರ್? ಹುಡುಕಿ ಕೊಡ್ತೀವಿ" ಎಂಬ ಉತ್ತರ ಹಲವು ಕಂಠಗಳಿಂದ ಬಂತು.

ಕೊಠಡಿ ಹುಡುಕುತಿದ್ದುದಕ್ಕೆ ನಿಜವಾದ ಕಾರಣವೇನೆಂಬುದು ಕೆಲವು ಹುಡುಗರಿಗೆ ಹೊಳೆದೇ ಹೊಳೆಯಿತು.

ಮಾರನೆ ದಿನ ಒಬ್ಬಿಬ್ಬರು ಹುಡುಗರು ಒಂದೆರಡು ಕೊಠಡಿಗಳನ್ನು ಜಯದೇವನಿಗೆ ತೋರಿಸಿದರು. ನಾಲ್ಕೈದು ರೂಪಾಯಿ ಬಾಡಿಗೆ. ಹೇಳಿ ಕೊಳ್ಳುವ ಅನುಕೂಲತೆಯೊಂದೂ ಇರಲಿಲ್ಲ. ಆ ಎರಡರಲ್ಲೇ ಯಾವುದಾದ ರೊಂದನ್ನು ಗೊತ್ತು ಮಾಡುವುದೇ ಮೇಲೆಂದುಕೊಂಡ ಜಯದೇವ.

ಅಷ್ಟರಲ್ಲೇ ನಾಗರಾಜ ಎಂಬೊಬ್ಬ ವಿದ್ಯಾರ್ಥಿ, ಜಯದೇವನ ಬಳಿಗೆ ಪ್ರತ್ಯೇಕವಾಗಿ ಬಂದು ಹೇಳಿದ:

"ನಮ್ಮನೇ ಮಹಡಿ ಮೇಲೆ ಒಂದು ರೂಮಿದೆ ಸಾರ್. ಕಕ್ಕಸು-ಸ್ನಾನಕ್ಕೆಲ್ಲ ಪಕ್ಕದಿಂದ್ಲೇ ಇಳಿದ್ಬಿಟ್ಟು ಹೋಗ್ಬಹುದು. ಬರ್ತೀರಾ ಸಾರ್?"

"ಬೇರೆ ಯಾರಿರ್ತಾರೆ ಅಲ್ಲಿ?"

"ಯಾರೂ ಇಲ್ಲ ಸಾರ್. ಮಹಡೀನ ಗೋಡೌನ್ ಮಾಡಿದಾರೆ."

ಆ ಹುಡುಗನ ತಂದೆ ಜಯರಾಮಶೆಟ್ಟರು ಆ ಊರಿನ ಪ್ರಮುಖ ವ್ಯಾಪಾರಿಯಾಗಿದ್ದರು. ಅವರು ಶ್ರೀಮಂತರೆಂಬುದು ಜಯದೇವನಿಗೆ ತಿಳಿದಿತ್ತು. ಆ ವಾತಾವರಣ ತನಗೆ ಸರಿಹೋಗುವುದೋ ಇಲ್ಲವೋ ಎಂದು ಆತ ಶಂಕಿಸಿದ.

"ಹೋಟೆಲಿಗೆ ದೂರವಾಗುತ್ತೇನೋ ?"

"ಇಲ್ಲ! ಆನಂದವಿಲಾಸದ ಬೋರ್ಡು ನಮ್ಮನೆಗೇ ಕಾಣಿಸುತ್ತೆ."

"ಎಷ್ಟಪ್ಪಾ ಬಾಡಿಗೆ?"

ಹುಡುಗ ಹೇಳಲು ಸಂಕೋಚಪಟ್ಟ. ಅದು ಜಾಸ್ತಿಯೇ ಇರಬಹುದೆಂಬ ಜಯದೇವನ ಸಂದೇಹ ಬಲವಾಯಿತು.

"ಎಷ್ಟು ಹೇಳು ?"

"ಬಾಡಿಗೆ ಇಲ್ಲ ಸಾರ್."

"ಅಂದ್ರೆ-?"

"ನಮ್ಮಪ್ಪ ಹೇಳಿದ್ರು ಸಾರ್-ಮೇಷ್ಟ್ರಿಂದ ಬಾಡಿಗೆ ತಗೋಬಾರ್ದೂಂತ."

"ಅದು ಹ್ಯಾಗಾಗುತ್ತೆ ?"

"ನನಗೆ ದಿನಾ ಸ್ವಲ್ಪ ಹೊತ್ತು ಪಾಠ ಹೇಳ್ಕೊಟ್ಬಿಡಿ ಸಾರ್."

ಒಳ್ಳೆಯ ಯೋಜನೆ! ನಾಗರಾಜನ ತಂದೆಯ ತೂಗಿ-ಅಳೆದು ನೋಡುವ ಸಾಮರ್ಥ್ಯಕ್ಕೆ ಜಯದೇವ ತಲೆದೂಗಿದ.

"ನೀವು ಒಪ್ಪಿದಿರಿ ಅಂತ ಹೇಳ್ಲೆ ಸಾರ್ ಮನೇಲಿ ?"

ಜಯದೇವ ಮುಗುಳ್ನಕ್ಕು ಕೊಠಡಿ ನೋಡದೆಯೇ, "ಹೂಂ" ಎಂದ.

ಆ ಕೊಠಡಿ ಚೆನ್ನಾಗಿಯೇ ಇತ್ತು. ಗಾಳಿ ಬೆಳಕು ಯಥೇಷ್ಟವಾಗಿ ಓಡಾಡುವ ಹಾಗಿತ್ತು ವಾತಾವರಣ. ಜಯರಾಮಶೆಟ್ಟರು ಉಪಾಧ್ಯಾಯರ ಅನುಕೂಲಕ್ಕೆಂದು ಒಂದು ಆರಾಮ ಕುರ್ಚಿಯನ್ನೂ ಹುಲ್ಲಿನ ಚಾಪೆಯನ್ನೂ ಕೊಟ್ಟರು. ಕೊಠಡಿಯ ಗೋಡೆಯ ಮೇಲೆ ಶೆಟ್ಟರ ಸಂಸಾರಕ್ಕೆ ಸಂಬಂಧಿ

ಸಿದ ಭಾವಚಿತ್ರಗಳಿದ್ದುವು. ತಿರುಪತಿ ವೆಂಕಟರಮಣನಿದ್ದ. ಮೇಕಪ್ ಸುಂದರಿ ಚಲಚ್ಚಿತ್ರ ತಾರೆಯ ದೊಡ್ಡ ಚಿತ್ರವಿದ್ದ ಕ್ಯಾಲೆಂಡರಿತ್ತು. ಮನೆಯವರು ಅದೊಂದನ್ನೂ ತೆಗೆಯಲಿಲ್ಲ. ಗೋಡೆ ಶುಭ್ರವಾಗಿ ಖಾಲಿಯಾಗಿಯೇ ಇರಬೇಕೆಂಬ ಆಸೆ ಜಯದೇವನಿಗೆ ಇತ್ತಾದರೂ ಹಾಗೆ ಸಲಹೆ ಮಾಡಲು ಆತ ಸಮರ್ಥನಾಗಲಿಲ್ಲ. -

ನಾಗರಾಜಶೆಟ್ಟರು ಜಯದೇವನಿಗೆ ಕೊಠಡಿ ಕೊಟ್ಟುದನ್ನು ಕೇಳಿ ನಂಜುಂಡಯ್ಯನೆಂದರು:

“ನಮ್ಮ ಊರಲ್ಲಿ ಒಳ್ಳೆಯ ಜನರಿಗೇನೂ ಕಡಮೆ ಇಲ್ಲ!”

...............

ತಿಂಗಳು ದಾಟಿದರೂ ವೆಂಕಟರಾಯರು ಮನೆ ಮಾಡುವ ಲಕ್ಷಣ ಕಾಣಿಸಲಿಲ್ಲ ರಂಗರಾಯರಿದ್ದ ಮನೆಗೆ ಬೇರೆ ಯಾರೋ ಒಕ್ಕಲು ಬಂದರು.

“ಮಳೆಗಾಲ ಕಳೆದು ಹೋಗ್ಲೀಂತ ಸುಮ್ಮಗಿದೀನಿ” ಎಂದು ಅವರು ವಿವರಣೆಯನ್ನೇನೋ ಕೊಟ್ಟರು.

ಆದರೆ ನಿಜವಾದ ಕಾರಣವನ್ನು ಜಯದೇವ ಊಹಿಸಿದ್ದ. ಆದಷ್ಟು ದಿನ ಹೆಚ್ಚು ವೆಚ್ಚವಿಲ್ಲದೆಯೇ ಕಳೆಯಲೆಂಬುದು ವೆಂಕಟರಾಯರ ಹಂಚಿಕೆಯಾಗಿತ್ತು.

ಅವರ ವಿಷಯವಾಗಿ ಗೌರವ ತಳೆಯುವುದು ಜಯದೇವನಿಂದಾಗಲಿಲ್ಲ. ಆ ಮನುಷ್ಯನಲ್ಲಿ ವಿದ್ವತ್ತೇನೋ ಇತ್ತು, ಆದರೆ ವಿನಯವೇನೂ ಇರಲಿಲ್ಲ. ತನ್ನ ಹೊರತು ಉಳಿದವರನ್ನೆಲ್ಲ ತುಚ್ಛವಾಗಿ ಕಾಣುವ ಅವರ ಮನೋವೃತ್ತಿಯಿಂದ ವಾಕರಿಕೆ ಬಂದ ಹಾಗಾಗುತಿತ್ತು ಜಯದೇವನಿಗೆ. ವೆಂಕಟರಾಯರಲ್ಲಿ ಇನ್ನೊಂದು ದುರ್ಗುಣವಿತ್ತು. ಅದು ವಕ್ರ ವಾಚಾಳಿತನ. ಒಬ್ಬರ ವಿರುದ್ಧ ಇನ್ನೊಬ್ಬರನ್ನು ಎತ್ತಿಕಟ್ಟುವುದರಲ್ಲಿ ಅವರು ಬಲು ನಿಪುಣರಾಗಿದ್ದರು.

“ನಂಜುಂಡಯ್ಯನಿಗೇನಪ್ಪ—ಊರಿನವರು. ಆದರೆ ಎಲ್ಲಿಂದಲೋ ಬಂದಿರೋರು, ಹೊರಹೊರಗಿನೋರು, ನಾವು ತಾನೆ?”

ಅಥವಾ, ಅದಕ್ಕಿಂತಲೂ ಒರಟಾಗಿ:

“ನಮ್ಮವರೂಂತ ಅಂದುಕೊಳ್ಳೋಕೆ ನೀವು ಒಬ್ಬರಾದರೂ ಇದೀರಲ್ಲ ಇಲ್ಲಿ...”

ಜಯದೇವ ಅವರೊಡನೆ ಬಲು ಎಚ್ಚರವಾಗಿ ವರ್ತಿಸುತ್ತಿದ್ದ. ತಾನು ಇಲ್ಲದಿದ್ದಾಗ ನಂಜುಂಡಯ್ಯನೊಡನೆ ತನ್ನ ವಿಷಯವಾಗಿ ಮಧುರವಲ್ಲದ ಮಾತುಕತೆ ನಡೆಯುತಿತ್ತೆಂಬುದು ಆತನಿಗೆ ಗೊತ್ತೇ ಇತ್ತು.

ಒಂದು ಕಾಲದಲ್ಲಿ ಜರಿ ಪೇಟವನ್ನು ಬಿಡದೆ ತೊಡುತಿದ್ದ ವೆಂಕಟ ರಾಯರು ಈಗ ಕಟ್ಟಾ ರಾಷ್ಟ್ರೀಯವಾದಿಯಾಗಿದ್ದರು. ಅಲ್ಲದೆ ಅವರು ಆಧುನಿಕರು ಕೂಡಾ. ದೇವತಾ ಪ್ರಾರ್ಥನೆಯಲ್ಲಿ ಬದಲಾವಣೆಯಾಗ ಬೇಕೆಂದು ಅವರು ಸೂಚಿಸಿದರು.

"ಏನು ಜಯದೇವ, ಯಾವ ಹಾಡು ಸೂಚಿಸ್ತೀರಾ ನೀವು? 'ದೇವಿ ಭುವನ ಮನಮೋಹಿನಿ' ಇರ್ಲ್ಲೋ?"

ಆ ಪ್ರಶ್ನೆಯಲ್ಲಿ ವ್ಯಂಗ್ಯವಿತ್ತು. ಜಯದೇವ ತಕ್ಷಣ ಉತ್ತರ ವೀಯಲಿಲ್ಲ.

ತಾವು ಸೂಚಿಸುವುದು ಅಗತ್ಯವೆಂದು ಭಾವಿಸಿ ನಂಜುಂಡಯ್ಯ ನೆಂದರು:

"ಬದಲಾಯಿಸಬೇಕು ನಿಜ. ನಾನು ಆ ಕಡೆ ಗಮನವನ್ನೇ ಕೊಟ್ಟಿ ಲ್ಲಿಲ್ಲ. ಕಾಯೌ ಶ್ರೀಗೌರಿ ಚೆನ್ನಾಗಿರುತ್ತೆ—ಅಲ್ವೆ?"

ಕೊನೆಗೂ ಮನಸ್ಸಿನಲ್ಲಿದ್ದುದನ್ನು ಜಯದೇವ ಹೇಳಿದ:

"ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು—ಇದೋಣ."

"ಬೇಡೀಪ್ಪ ಸದ್ಯಃ!" ಎಂದು ವೆಂಕಟರಾಯರು ನಕ್ಕರು.

"ಯಾಕಪ್ಸರ್?"

"ನೆಹರೂ ಹೇಳಿದ್ದು ಓದಿಲ್ವೇನ್ರೀ? ಭಾಷಾ ದುರಭಿಮಾನ ಇರ ಕೂಡ್ದು. ಅಲ್ದೆ, ಕರ್ನಾಟಕ ಅನ್ನೋದು ಎಲ್ಲಿದೆ? ನಾವು ಮೈಸೂರು ರಾಜ್ಯದಲ್ಲಿದ್ಕೊಂಡು ಆ ಹಾಡು ಹೇಳೋದೆ? ಅದು ರಾಜಕೀಯ ವಿಷಯ ಬೇರೆ!"

ತಮ್ಮ ಸೂಚನೆಯೇ ವೆಂಕಟರಾಯರಿಗೂ ಮೆಚ್ಚುಗೆಯಾಗುತ್ತದೆಂದು ನಂಜುಂಡಯ್ಯ ನಂಬಿದರು.

"ನೋಡಿ ನಂಜುಂಡಯ್ಯ, ನನ್ನ ವೈಯಕ್ತಿಕ ಅಭಿಪ್ರಾಯ ಹೇಳೋ ದಾದ್ರೆ ನಿಮ್ಮ ಸೂಚನೇನೇ ನನಗೂ ಮಾನ್ಯ. ಆದರೆ ನಮ್ಮ ಮಂತ್ರಿ ಮಂಡಲಕ್ಕೆ ಅದು ಹಿಡಿಸೋದಿಲ್ಲ."

ನಂಜುಂಡಯ್ಯ ಸುಮ್ಮನೆ ಕುಳಿತರು.

ಇದಕ್ಕೆಲ್ಲಾ ಪರಿಹಾರ ಅಂದ್ರೆ—ಜನಗಣಮನ. ರಾಷ್ಟ್ರಗೀತೆ ಹಾಕ್ಬಿ ಡೋಣ. ನಮ್ಮ ಹುಡುಗರಲ್ಲಿ ರಾಷ್ಟ್ರಾಭಿಮಾನ ತುಂಬಿದ ಹಾಗೂ ಆಗುತ್ತೆ. ಅಲ್ವೆ ಜಯದೇವ್ ?"

ಜಯದೇವ ಅಲ್ಲವೆನ್ನಲೂ ಇಲ್ಲ; ಹೌದೆನ್ನಲೂ ಇಲ್ಲ. ನಂಜುಂಡಯ್ಯ ನಿಗೂ ಒಂದುರೀತಿಯಲ್ಲಿ ಮುಖಭಂಗವಾಯಿತು.

ಆ ಸಾಯಂಕಾಲ ನಂಜುಂಡಯ್ಯ ಜಯದೇವನನ್ನು ಕರೆದರು.

"ಬನ್ನಿ, ವಾಕಿಂಗ್ ಹೋಗೋಣ."

ತನ್ನೊಬ್ಬನನ್ನೇ ಕರೆಯುವುದೆಂದರೆ ವೆಂಕಟರಾಯರಿಗೆ ಅಪ್ರಿಯವಾ ಡುದನ್ನೇನೋ ಮಾತಾಡುವುದಕ್ಕೋಸ್ಕರ ಇರಬೇಕು—ಎಂದು ಜಯದೇವ ಊಹಿಸಿದ.

"ಇಲ್ಲ ಸಾರ್ ಕ್ಷಮಿಸಿ. ಇವತ್ತು ಬಟ್ಟೆ ಒಗೆದು ಹಾಕ್ಬೇಕು, ಬರೋ ದಿಲ್ಲ" ಎಂದು ಹೇಳಿ ಆತ ತಪ್ಪಿಸಿಕೊಂಡ.

..................

ವೆಂಕಟರಾಯರು ಆಫೀಸು ಕೊಠಡಿಯಲ್ಲೂ ಸುಧಾರಣೆ ಮಾಡಿದರು. ಪಂಚಮ ಜಾರ್ಜರು ನಿವೃತ್ತರಾಗಬೇಕಾಯಿತು. ಊರಲ್ಲಿ ಸಂತೆಯ ದಿನ ಹೊಸ ಭಾವಚಿತ್ರಗಳನ್ನು ಕೊಂಡುತಂದರು. ಒಂದೆಡೆ ರಾಷ್ಟ್ರಾಧ್ಯಕ್ಷರು ಮತ್ತು ರಾಜಪ್ರಮುಖರು; ಇನ್ನೊಂದೆಡೆ ರಾಷ್ಟ್ರದ ಪ್ರಧಾನಿ ಮತ್ತು ಮೈಸೂರಿನ ಮುಖ್ಯ ಸಚಿವರು...

ಗೋಡೆ ಗಡಿಯಾರ ದುರಸ್ತಿಯಾಯಿತು.

ಶಾಲೆಗೊಬ್ಬ ಜವಾನ ಬೇಕೇಬೇಕೆಂದು ಆಗ್ರಹಪಡಿಸಿ, ವೆಂಕಟ ರಾಯರು ಮೇಲಧಿಕಾರಿಗಳಿಗೆ ಬರೆದರು. ಅಷ್ಟರವರೆಗೆ ತಾತ್ಕಾಲಿಕವಾಗಿ ಇರ ಲೆಂದು ತಿಂಗಳಿಗೆ ಎಂಟು ರೂಪಾಯಿ ಸಂಬಳದ ಮೇಲೆ, ಶಂಕರಪ್ಪನವರ ಸಹಾಯದಿಂದ, ಆಳೊಬ್ಬನನ್ನು ಗೊತ್ತು ಮಾಡಿದರು.

ಶಾಲೆಯ ಕೆಲಸವನ್ನಲ್ಲವಾದರೂ ಆ ಜವಾನ ವೆಂಕಟರಾಯರ ಸಮಸ್ತ ಕೆಲಸಗಳನ್ನೂ ಮಾಡಿದ.

ಆಡಳಿತದ ಶಿಸ್ತು-ಅಚ್ಚುಕಟ್ಟು ಯಾರಾದರು ಮೆಚ್ಚುವಂಥದೇ. ಅದ ಕ್ಕಾಗಿ ವೆಂಕಟರಾಯರನ್ನು ಟೀಕಿಸುವ ಹಾಗೆಯೇ ಇರಲಿಲ್ಲ. ಆದರೆ ಅವರ

ಎಲ್ಲ ಸಾಮರ್ಥ್ಯವೂ ಸಣ್ಣ ಪುಟ್ಟ ಕೆಲಸಗಳಿಗಾಗಿಯೇ ವಿನಿಯೋಗವಾಗುತ್ತಿತ್ತು.

ಒಂದು ವಿಷಯದಲ್ಲಿ ಮಾತ್ರ ಅವರು ಕೃತಕೃತ್ಯರಾಗಲೇ ಇಲ್ಲ. ಅದು ವಿದ್ಯಾರ್ಥಿಗಳ ಒಲವನ್ನು ಸಂಪಾದಿಸುವ ವಿಷಯ. ಎದುರಿಗೇನೋ ಹುಡುಗರು ಭಯಭೀತಿಗಳನ್ನು ವ್ಯಕ್ತಪಡಿಸುತಿದ್ದರು. ಆದರೆ ವೆಂಕಟರಾಯರು ಮುಖ ತಿರುಗಿಸಿದೊಡನೆ, ಅವರ ಹಾವ ಭಾವಗಳನ್ನು ಅಣಕಿಸುತ್ತ ಲೇವಡಿ ಮಾಡುತಿದ್ದರು.

ಸ್ವಲ್ಪ ಮಟ್ಟಿಗೆ ಈ ಮಾತು ನಂಜುಂಡಯ್ಯನಿಗೂ ಅನ್ವಯಿಸುತಿತ್ತು.

ಜಯದೇವ ಮಾತ್ರ ಆ ಕ್ಷೇತ್ರದಲ್ಲಿ ಸಂಪೂರ್ಣ ವಿಜಯಿಯಾಗಿದ್ದ. ಪಾಠ ಹೇಳಿಕೊಡುವ ಕೆಲಸಕ್ಕೆ ಹೊಸಬನಾದರೂ ಆತ ವಿದ್ಯಾರ್ಥಿಗಳ ಮೆಚ್ಚುಗೆ ಗಳಿಸಿದ. ಒಬ್ಬಂಟಿಗನಾಗಿ ಜಯದೇವ ದೊರೆತರೆ ಸಾಕು, ಹುಡುಗರು ಇಲ್ಲವೆ ಹುಡುಗಿಯರು ಅವನನ್ನು ಮುತ್ತಿಕೊಳ್ಳುತಿದ್ದರು. ಹಾದಿಯಲ್ಲಿ ಹುಡುಗರು ಕಾಣಲು ದೊರೆತಾಗ ಜಯದೇವನಿಗೆ ಸಿಗುತಿದ್ದ ನಮಸ್ಕಾರಗಳೂ ಅಷ್ಟೇ. ಆ ವಂದನೆಗಳು ಪ್ರೀತಿಪೂರ್ವಕವಾಗಿ ಬರುತಿದ್ದುವು. ತರಗತಿಗಳ ಒಬ್ಬಿಬ್ಬರು ಪೋಲಿ ಹುಡುಗರು ಕೂಡ ಜಯದೇವನ ನಗೆಯ ಆಹ್ವಾನಕ್ಕೆ ಮಾರು ಹೋಗುತಿದ್ದರು. ಹಾಗೆ ಹಾದಿಯಲ್ಲಿ ನಮಸ್ಕಾರಗಳನ್ನು ಸ್ವೀಕರಿಸಿದಾಗಲೆಲ್ಲ ಜಯದೇವನಿಗೆ ತಾನು ವಿದ್ಯಾರ್ಥಿಯಾಗಿದ್ದ ಕಾನಕಾನಹಳ್ಳಿ ಶಾಲೆಯ ನೆನಪಾಗುತ್ತಿತ್ತು. ಅಲ್ಲೊಬ್ಬ ಉಪಾಧ್ಯಾಯರು, ಶಾಲೆಯ ಹೊರಗೆ ಬೀದಿಯಲ್ಲಿ ವಿದ್ಯಾರ್ಥಿಗಳು ಯಾರಾದರೂ ತಮಗೆ ನಮಸ್ಕರಿಸದೇ ಹೋದರೆ ಗುರುತಿಟ್ಟುಕೊಂಡು ಮರುದಿನ ತರಗತಿಯಲ್ಲಿ ಅವರನ್ನು ಬೆಂಚಿನ ಮೇಲೆ ನಿಲ್ಲಿಸಿ, ಶಿಷ್ಟಾಚಾರವನ್ನು ಕಲಿಸಿಕೊಡುತಿದ್ದರು. ಆ ನೆನಪು ಆದಾಗಲೆಲ್ಲ ಜಯದೇವನಿಗೆ ನಗು ಬರುತಿತ್ತು.

ಮನಸ್ಸು ಉಲ್ಲಾಸವಾಗಿದ್ದ ದಿನಗಳಲ್ಲಿ ಜಯದೇವ ಬೆಂಗಳೂರಿಗೆ ವೇಣುಗೋಪಾಲನಿಗೆ ಕಾಗದ ಬರೆಯುತಿದ್ದ. ಒಮ್ಮೊಮ್ಮೆ ಕಾನಕಾನಹಳ್ಳಿಗೆ ತನ್ನ ತಂದೆಗೂ ಕೂಡಾ.

ಅವರಿಂದಲೂ ಆಗಾಗ್ಗೆ ಕಾಗದಗಳು ಬರುತಿದ್ದುವು. ಜಗತ್ತು ವಿಶಾಲವಾಗಿದೆ ಎಂಬುದನ್ನು ತೋರಿಸಿಕೊಡುತಿದ್ದುವು.

ಆದರೆ, ಘಾಸಿಗೊಂಡ ಹೃದಯದೊಡನೆ ವರ್ಗವಾಗಿ ಹೋದ ರಂಗರಾಯರು ಜಯದೇವನಿಗೆ ಬರೆಯಲೇ ಇಲ್ಲ......

ನಾಲ್ವತ್ತು ಮತ್ತು ಹದಿನೈದು ರೂಪಾಯಿ ಸಂಬಳ ಜಯದೇವನಿಗೆ ಬರುತಿತ್ತು. ಆ ಸಂಬಳವನ್ನು ತಾಲ್ಲೂಕು ಕೇಂದ್ರದಿಂದ ತರುವವರಿಗೆ ಪ್ರವಾಸ ಭತ್ತೆ ಒಂದು ರೂಪಾಯಿ. ಅಧಿಕೃತ ಜವಾನನಿದ್ದಿದ್ದರೆ ಆ ರೂಪಾಯಿಯನ್ನು ಆತನ ತಲೆಗೆ ಕಟ್ಟಬಹುದಿತ್ತು. ನಡೆದುಕೊಂಡೋ ಉಪವಾಸ ಬಿದ್ದೋ ಹೇಗಾದರೂ ಮಾಡಿ ಆತ ಹೋಗಿ ಬರುತಿದ್ದ... ಆದರೆ ಜಯದೇವನಿದ್ದ ಶಾಲೆಗೆ ಸಂಬಂಧಿಸಿ ಅಂತಹ ತೊಂದರೆ ಇರಲಿಲ್ಲ. ಯಾಕೆಂದರೆ, ನಂಜುಂಡಯ್ಯನೇ ಆ ಕೆಲಸ ಮಾಡುತಿದ್ದರು. ಅವರು ಒಂದು ರೂಪಾಯಿಯನ್ನೇನೋ ಪಡೆಯುತಿದ್ದರೂ ಸ್ವಂತದ ಐದು ರೂಪಾಯಿ ವೆಚ್ಚ ಮಾಡದೆ ಹಿಂತಿರುಗುತ್ತಿರಲಿಲ್ಲ. ಒಂದೆರಡು ದಿನ ತಡವಾಗಿ ಅವರು ವಾಪಸು ಬಂದರೂ ಬಂದರೇ.

ಒಮ್ಮೆ ವೆಂಕಟರಾಯರೆಂದರು :

"ಅಲ್ಲ ಜಯದೇವ್, ನಮ್ಮ ನಂಜುಂಡಯ್ಯ ತುಂಬಾ ರಸಿಕರೂಂತ ಕಾಣುತ್ತೆ."

ನಂಜುಂಡಯ್ಯನ ವಿದ್ವತ್ತಿನ ಕುರಿತು ಯೋಚಿಸಿ ಜಯದೇವ ಗೌರವ ತಳೆದುದಿತ್ತೇ ಹೊರತು, ರಸಿಕತೆಯ ವಿಷಯ ಅವನ ಗಮನಕ್ಕೆ ಬಂದಿರಲಿಲ್ಲ. ಹೀಗಾಗಿ, ವೆಂಕಟರಾಯರಿಗೆ ಏನು ಉತ್ತರ ಕೊಡಬೇಕೆಂದು ತಿಳಿಯದೆ, ಪ್ರಶ್ನಾರ್ಥಕ ದೃಷ್ಟಿಯಿಂದ ಅವರನ್ನೆ ಜಯದೇವ ನೋಡಿದ.

"ಸಂಬಳ ತರೋ ಕೆಲಸ ಒಂದು ಸಲವಾದರೂ ನಂಜುಂಡಯ್ಯ ತಪ್ಪಿ ಸ್ಕೊಳ್ಳೋದೇ ಇಲ್ವಲ್ರೀ! ಅಂತೂ ಅಲ್ಲಿ ಮಜಾ ಮಾಡಿ ವಾಪ್ಸು ಬರ್ತಾರೆ... ಸಿನಿಮಾ ಗಿನಿಮಾ ನೋಡ್ಕೊಂಡು..."

ಈ ಊರಿನಲ್ಲಿ ಸಿನೀಮಾ ಇರಲಿಲ್ಲ. ನಾಟಕ ಕಂಪೆನಿಯೊಂದು ಬಂದು ಡೇರೆ ಹಾಕಿ ದಿವಾಳಿಯೆದ್ದು ಹೋಗಿತ್ತಂತೆ ಹಿಂದಿನ ವರ್ಷ.

"ಇರಬಹುದು ಸಾರ್. ಮನರಂಜನೆಯೇ ಇಲ್ಲ ನೋಡಿ ಈ ಪುಟ್ಟ ಊರಲ್ಲಿ."

"ನಿಮಗೆ ಇಲ್ಲಿ ಬೇಜಾರಾಗೊಲ್ವೆ ಜಯದೇವ್ ?"

"ಬಂದು ಷುರೂನಲ್ಲಿ ಸ್ವಲ್ಪ ದಿವಸ ಆಯ್ತು. ಈಗ ಅಭ್ಯಾಸವಾಗಿದೆ ಸಾರ್."

"ನನಗೆ ಇದೆಲ್ಲಾ ಗಮನಕ್ಕೆ ಬರೋದಿಲ್ಲ. ಶಾಲೆಯ ಅಭಿವೃದ್ಧಿ ಚೆನ್ನಾಗಿ ಆಗ್ತಿದ್ರೆ ಅಷ್ಟರಿಂದ್ಲೇ ನಾನು ಸುಖಿಯಾಗಿರ್ತೀನಿ."

ಆ ಮಾತಿನಲ್ಲಿ ಕಾಪಟ್ಯವಿತ್ತು. ಅಲ್ಲದೆ, ನಂಜುಂಡಯ್ಯನಿಗಿಂತ ತಾನು ಮೇಲು ಎಂಬ ಒಣ ಜಂಭವಿತ್ತು.

ಒಮ್ಮೊಮ್ಮೆ ವಿದ್ಯಾಭ್ಯಾಸದ ವಿಷಯವಾಗಿಯೇ ಸಂಭಾಷಣೆಯಾಗುತಿದ್ದಾಗ ವೆಂಕಟರಾಯರು ಹೇಳುತಿದ್ದರು :

"ಈಗ ಕಾಲೇಜುಗಳೆಲ್ಲ ಕಾರ್ಖಾನೆಗಳಾಗಿವೆ. ಡಿಗ್ರಿಯವರ್ನ ಯಾರು ಕೇಳ್ತಾರೆ? ಕಾಸಿಗೊಂದು ಕೊಸರಿಗೊಂದು. ಈಗಿನ ಪದವೀಧರರಿಗಿಂತ ಹಳೇ ಮೆಟ್ರಿಕ್ಯುಲೇಟುಗಳೇ ಮೇಲು."

ಆದರೆ ಈ ಸರಣಿಯಲ್ಲಿ ಅವರು ಮಾತನಾಡುತಿದ್ದುದು ನಂಜುಂಡಯ್ಯ ಇಲ್ಲದಿದ್ದಾಗ ಮಾತ್ರ.

............

ಸದಾ ಕಾಲವೂ ವೆಂಕಟರಾಯರು ಮತ್ತು ಜಯದೇವನ ನಡುವೆ ಸೌಹಾರ್ದದ ವಾತಾವರಣವಿರುವುದು ಸಾಧ್ಯವಿರಲಿಲ್ಲ. ಸವೆದು ಹೋಗಿದ್ದೊಂದು ವಿದ್ಯಾಯಂತ್ರದ ಸವಕಲು ಕೀಲಿಯಾಗಿ ಬಾಳಲು ಜಯದೇವ ಬಂದಿದ್ದನೆ? ದಿನಕಳೆದಂತೆ, ವಿದ್ಯಾಭ್ಯಾಸದ ಸಮಸ್ಯೆಗಳು ಸ್ಪಷ್ಟವಾದಂತೆ, ತನ್ನ ಆತ್ಮವಿಶ್ವಾಸವೂ ಬೆಳೆದಂತೆ ಜಯದೇವ ಮಾತನಾಡತೊಡಗಿದ.

ವಾಚನಾಲಯಕ್ಕೇಂತ ಅಂದಾಜು ಪಟ್ಟೀಲಿ ಹಣ ಮೀಸಲಿದೆಯಲ್ಲಾ ಸಾರ್?"

"ಇದೆ. ಏನ್ಮಾಡೋಣ ಅಂತೀರಿ?"

"ಅದರಿಂದ ಒಂದಿಷ್ಟು ಒಳ್ಳೆ ಪುಸ್ತಕ ಕೊಂಡುಕೊಳ್ಳೋಣ."

"ಹೊಸ ಪುಸ್ತಕ!"

ಆದರಲ್ಲಿ ಆಶ್ಚರ್ಯಪಡಬೇಕಾದುದು ಏನಿತ್ತೋ! ಆದರೆ ವೆಂಕಟ ರಾಯರು ತಲೆಯಾಡಿಸಿದರು.

"ಛೆ! ಛೆ! ಜಯದೇವ್. ಹಾಗೆ ಮಾಡೋದು ದುಡ್ಡುದಂಡ

ಹಳೆ ಕತೆ ಕಾದಂಬರಿಗಳು ಕಡಿಮೆಗೆ ಸಿಗುತ್ವೆ. ಒಂದಿಷ್ಟು ತಂದು ಹಾಕಿದರಾಯ್ತು."

"ಅಷ್ಟಲ್ಲ ಸಾರ್. ವಿಶ್ವವಿದ್ಯಾನಿಲಯದವರು ಪ್ರಕಟಿಸಿದ ಮೂರಾಣೆ ಪುಸ್ತಕಗಳೂ ನಮ್ಮಲ್ಲಿಲ್ಲ. ವಿಜ್ಞಾನಕ್ಕೆ ಸಂಬಂಧಿಸಿ 'ಬಾಲಪ್ರಪಂಚ' ದಂಥ ಪುಸ್ತಕಗಳನ್ನೂ ನಾವು ಕೊಂಡ್ಕೋಬೇಕು."

"ಇದೆಲ್ಲಾ ಹುಡುಗರಿಗೆ ರುಚಿಸುತ್ತೆ ಅಂತೀರಾ ?"

"ಹುಡುಗರು ಅಂತಲ್ಲ ಸಾರ್–ನಾವೂ ಓದಿ ನೋಡ್ಬಹುದು."

"ನಾವು ಓದೋದು ! ಹ ಹ್ಹ ! ಚೆನ್ನಾಗಿ ಹೇಳಿದ್ರಿ. "

"ಯಾಕ್ಕೂಡದು ? ಮನುಷ್ಯ ಸಾಮಾನ್ಯವಾಗಿ ಜೀವಮಾನವೆಲ್ಲ ವಿದ್ಯಾರ್ಥಿಯೇ ಅಲ್ಲವೇ ?"

"ಅದು ಬರೇ ಸಿದ್ಧಾಂತ."

...ಮಾತಿಗೆ ಮಾತು ಬೆಳೆದು ಗೇಣಿ ಅಕ್ಕಿಗೆ ನಷ್ಟವೊದಗಿತು. ವಾಚನಾಲಯಕ್ಕೆ ಮೀಸಲಿರುವ ಹಣವನ್ನು ಉಪಯೋಗಿಸುವ ವಿಚಾರ ಅಲ್ಲಿಗೇ ಉಳಿಯಿತು

...ಶಾಲೆಯಲ್ಲಿದ್ದ ಕಾಲ್ಚೆಂಡು ಹಳೆಯದು. ಅದಕ್ಕೆ ತೂತುಗಳು ಬಿದ್ದಾಗಲೆಲ್ಲ ಹತ್ತಿರದ ಸೈಕಲು ಅಂಗಡಿಯವನು 'ಪಂಚೇರು' ತೆಗೆದು ಕೊಡುತಿದ್ದ. ಈಗ ಆ 'ಪಂಚೇರು'ಗಳೆಲ್ಲ ಹೊಸ ಪಂಚೇರುಗಳೊಡನೆ ಮುಖ ತೋರಿಸಿದ್ದುವು.

ಹುಡುಗರ ಪರವಾಗಿ ಜಯದೇವ ಮುಖ್ಯೋಪಾಧ್ಯಾಯರೊಡನೆ ಮಾತನಾಡಿದ.

"ನಮ್ಮ ಫುಟ್‌ಬಾಲ್‌ಗೆ ಪೆನ್‌ಶನ್ ಕೊಡೋಕಾಲ ಬಂತು ಸಾರ್."

ಆ ಪದಪ್ರಯೋಗ ವೆಂಕಟರಾಯರಿಗೆ ರುಚಿಸಲಿಲ್ಲ. ತಾವೂ ಹಳಬರಾಗುತಿದ್ದುದನ್ನು ಪೆನ್‌ಶನ್ ಎನ್ನುವ ಪದ ನೆನಪಿಗೆ ತಂದುಕೊಟ್ಟಿತು.

"ಈಗೇನ್ಬೇಕು ಜಯದೇವ್ ?"

"ಹುಡುಗರು ಹೊಸ ಫುಟ್‌ಬಾಲು ಕೇಳ್ತಿದಾರೆ. ಈಗ ಒಂದು ವಾರದಿಂದ ಅವರು ಚೆಂಡಾಟ ಆಡಿಯೇ ಇಲ್ಲ."

ವೆಂಕಟರಾಯರು ಸುಮ್ಮನಿದ್ದರು. ಕೊನೆಗೆ ಅಂದರು:

"ಮುಂದಿನ ಸಾರೆ ಸಂಬಳ ತರೋಕೆ ನಂಜುಂಡಯ್ಯ ಹೋಗ್ತಾರಲ್ಲ—ಆಗ ತರಿಸಿದರಾಯ್ತು."

"ಮೂರನೇ ತರಗತಿ ಮಾನಿಟರ್, ನಮ್ಮ ಪೋಲೀಸ್ ಇನ್ಸ್‌ಪೆಕ್ಟರ್ ಹುಡುಗ, ಕ್ರಿಕೆಟ್ ಆಟ ಷುರು ಮಾಡ್ಬೇಕೂಂತ ಹೇಳ್ತಿದಾನೆ."

"ಸರಿ, ಸರಿ...ಅದಕ್ಕೆಲ್ಲಿಂದ ತರೋದು ನೂರು ರೂಪಾಯಿ ?"

"ಆ ಮೇಲೆ ಹುಡುಗಿಯರು ತಮಗೊಂದು ರಿಂಗ್ ಟೆನ್ನಿಸ್ ಆಟಕ್ಕೆ ನೆಟ್ಟು-ರಿಂಗು ಬೇಕೂಂತ ಕೇಳ್ತಿದಾರೆ."

"ಆಗ್ಹೋಯ್ತು ! ವಿದ್ಯಾರ್ಥಿಗಳು ಹೀಗೆಲ್ಲಾ ಮಾತನಾಡೋದಕ್ಕೆ ನೀವೇ ಕಾರಣ ಅಂತ ಭಾವಿಸ್ಲೆ ಮಿ. ಜಯದೇವ್ ?"

"ಛೆ ! ಛೆ! ಹಾಗೆ ತಪ್ಪು ತಿಳ್ಕೋಬೇಡಿ ಸಾರ್."

"ಮತ್ತೆ ? ಇದೆಲ್ಲಾ ಏನೂಂತ ?"

"ಆಟದ ನಿಧೀಂತ ಇದೆಯಲ್ಲ. ಅದರಿಂದ ಖರ್ಚುಮಾಡಬಹು ದೂಂತ ಹುಡುಗರು ಹೇಳಿದ್ರು."

"ಅವರು ಹೇಳಿದ್ರು ; ನೀವು ಕೇಳಿದ್ರಿ ; ಅಲ್ಲ ?"

ಈ ವಿಷಯದಲ್ಲೂ ಜಯದೇವನಿಗೆ ನಿರಾಶೆಯಾಯಿತು.

ಆದರೆ ಈ ಮಾತುಕತೆಯ ಪರಿಣಾಮವಾಗಿ ಮುಖ್ಯೋಪಾಧ್ಯಾಯರು ವಾರಕ್ಕೆ ಎರಡು ಸಾರೆ ನಡೆಯಬೇಕಾದ 'ಡ್ರಿಲ್' ಪಾಠವನ್ನು ಕ್ರಮಬದ್ಧ ವಾಗಿ ತಾವೇ ನಡೆಸಿದರು. ಆದರೆ, ಹಾರಿ ಕುಪ್ಪಳಿಸಿ ಮೈಬಾಗಿಸಿ ಕೈಬೀಸಿ ಅವರಿಗೆ ಸಾಕುಸಾಕಾಗಿ ಹೋಯಿತು. ಡ್ರಿಲ್ ಪಾಠವನ್ನೂ ಕೊನೆಯಲ್ಲಿ ಯುವಕ ಜಯದೇವನೇ ನಡೆಸಿದ.

ನಂಜುಂಡಯ್ಯ ಆ ವಿಷಯವಾಗಿ ಅಂದರು:

"ನನಗೂ ಈ ಆಟಗಳಿಗೂ ಎಣ್ಣೆ-ಸೀಗೆ. ಮೊದಲಿಂದಲೂ ಅಷ್ಟೇ. ನಾನು ಪುಸ್ತಕಕೀಟ, ಸದ್ಯಃ ಡ್ರಿಲ್ ಪಾಠಗಳ್ನ ನೀವೇ ನಡೆಸ್ಕೊಂಡು ಹೋಗ್ತಿದೀರಲ್ಲ ! ಅದರಿಂದ ನನಗೆಷ್ಟೋ ಸಮಾಧಾನವಾಗಿದೆಯಪ್ಪ!"

ಹಾಗೆ ನೋಡಿದರೆ ಜಯದೇವನೂ ಪುಸ್ತಕಕೀಟವೇ ಆಗಿದ್ದ.

ನಂಜುಂಡಯ್ಯ ಸಿಗರೇಟು ಸೇದುತ್ತ ಕುಳಿತಿದ್ದರು. ಅವರನ್ನು ನೋಡುತ್ತ ಜಯದೇವ ಮನಸಿನಲ್ಲಿ ಅಂದುಕೊಂಡ:

'ಇವರು ಸುಖಜೀವಿ. ಸಂಶಯವೇ ಇಲ್ಲ.'

.........

ಸುಖಜೀವಿಯಲ್ಲದ ಜಯದೇವನಿಗೆ ಶಾಲೆಮುಗಿದ ಅನಂತರ ಸಂಜೆಯ ಹೊತ್ತನ್ನು ಕಳೆಯುವುದು ಕಷ್ಟವಾಯಿತು. ತಿದ್ದಲು ಹುಡುಗರ 'ಕಾಪಿ ಪುಸ್ತಕ' 'ನೋಟ್ಸ್‌ಪುಸ್ತಕ'ಗಳಿಷ್ಟಿದ್ದರೂ ರಾತ್ರಿಯ ಸ್ವಲ್ಪ ಹೊತ್ತಿನಲ್ಲೇ ಆ ಕೆಲಸ ಮುಗಿಯುತಿತ್ತು....ಶಾಲೆಯ ಹುಡುಗರಿಗೆ ಆಡಲು ಒಳ್ಳೆಯ ಆಟದ ಬಯಲಿರಲಿಲ್ಲ. ಹುಡುಗರನ್ನು ಹುರಿದುಂಬಿಸಿ ಶ್ರಮದಾನದ ಸೇನೆ ಯೊಂದನ್ನು ಸಿದ್ಧಗೊಳಿಸುವುದು ಸಾಧ್ಯವಾದರೆ—ಎನಿಸಿತು ಆತನಿಗೆ.

ಜಯದೇವ ಹುಡುಗರೊಡನೆ ಆ ವಿಷಯವನ್ನು ಪ್ರಸ್ತಾಪಿಸಿದ. ಕೆಲ ಹುಡುಗರು ಕೇಳಿದರು:

"ನಾವೇ ಮಣ್ಣು ಅಗೀಬೇಕೆ ಸಾರ್ ?"

"ಹೂಂ ಮತ್ತೆ."

"ಹೊರೋದು ?"

"ನಾವೇನೇ !"

ಒಬ್ಬಿಬ್ಬರು ಹುಡುಗರು, "ಮನೇಲಿ ಕೇಳಿ ಬರಬೇಕು ಸಾರ್" ಎಂದರು. ಹೆಚ್ಚಿನ ಹುಡಗರೇನೋ ಜಯದೇವನ ಜತೆಯಲ್ಲಿ ಆ ಶ್ರಮದ ಕೆಲಸಕ್ಕೆ ಸಿದ್ಧರಾದರು.

ಆದರೆ ಅದಕ್ಕೆ ಮುಖ್ಯೋಪಾಧ್ಯಾಯರ ಸಮ್ಮತಿ ಸಿಗಲಿಲ್ಲ.

"ಇದೆಲ್ಲಾ ಯಾಕೋ ಸರಿಯಾಗಿಲ್ಲ ಜಯದೇವ !"

"ಏನಾಯ್ತು ಸಾರ್ ?"

ಪ್ರತಿಭಟನೆಯೇನೋ ಎಂಬ ಸಂದೇಹ ಮೂಡುವಂತಹ ಧ್ವನಿಯಲ್ಲಿ ಜಯದೇವ ಕೇಳಿದ.

ವೆಂಕಟರಾಯರ ಉತ್ತರದ ಸ್ವರ ಜೋರಾಗಿಯೆ ಇತ್ತು.

"ಮತ್ತೇನಿದೆಲ್ಲ ? ನೀವು ಬಿತ್ತುತಾ ಇರೋದು ಅಶಿಸ್ತಿನ ಬೀಜ. ನಾನಿದಕ್ಕೆಲ್ಲಾ ಸಮ್ಮತಿ ಕೊಡೋದು ಸಾಧ್ಯವಿಲ್ಲ !"

"ಈ ರೀತಿ ಹುಡುಗರು ತಾವಾಗಿಯೇ ಸ್ವಾವಲಂಬನ ಜೀವನ ಅಭ್ಯಾಸ ಮಾಡೋದು ತಪ್ಪೆ ಸಾರ್?"

"ಸಿದ್ಧಾಂತ ನನಗೆ ಕಲಿಸ್ಬೇಡಿ. ನಿಮಗೇನೂ ತಿಳೀದು. ಹುಚ್ಚು ಚ್ಚಾಗಿ ಏನಾದರೂ ಮಾಡಿ ನಿಮ್ಮ ಕಾಲಿಗೆ ನೀವೇ ಕಲ್ಲು ಹಾಕ್ಕೊಬೇಡಿ.

ಇವರಿನ್ನೂ ಎಳೇ ಹುಡುಗ್ರು. ಕೂಲಿಕೆಲಸ ಮಾಡಿಸಿದ್ರೆ ಊರ್‍ನವರು ನಮ್ಮನ್ನ ಸುಮ್ನೆ ಬಿಟ್ಟಾರೇನ್ರಿ? ಏನು ಮಿ. ನಂಜುಂಡಯ್ಯ, ನೀವಾದರೂ ಹೇಳಿ ಇವರಿಗೆ."

ನಂಜುಂಡಯ್ಯ ಮುಗುಳ್ನಕ್ಕರು ಮಾತ್ರ.

ಸಂಜೆಯಾಯಿತು. ಜಯದೇವ ಮುಖ ಬಾಡಿಸಿ, ತಲೆಬಾಗಿಸಿ, ಹೊರಬಿದ್ದ. ಬೆಂಗಳೂರಿಗೆ ಅಭಿಮುಖವಾಗಿದ್ದೊಂದು ರಸ್ತೆಯಲ್ಲಿ ಕತ್ತಲಾಗುವವರೆಗೂ ಒಬ್ಬನೇ ನಡೆದು ಹೋದ. ಒಂದೆರಡು ನಿಮಿಷ ಅಳಬೇಕೆನಿಸಿತು. ಜತೆಯಲ್ಲೇ, 'ಥೂ! ಥೂ! ನಾನೇನು ಎಳೇ ಮಗು ಕೆಟ್ಟು ಹೋದೆನೆ?' ಎಂದು ತನಗೆ ತಾನೇ ಛೀಮಾರಿ ಹಾಕಿಕೊಂಡ. ರಂಗರಾಯರು ಇದ್ದಿದ್ದರೆ ಹೀಗಾಗುತ್ತಿರಲಿಲ್ಲ. ಅಥವಾ ನಂಜುಂಡಯ್ಯನೇ ಮುಖ್ಯೋಪಾಧ್ಯಾಯರಾಗಿದ್ದರೂ ಪರಿಸ್ಥಿತಿ ಇಷ್ಟು ಪ್ರತಿಕೂಲವಾಗುತ್ತಿರಲಿಲ್ಲ. ಅಂತೂ ಈ ವೆಂಕಟರಾಯರು-ಅಬ್ಬ!-ಎಂತಹ ಮನುಷ್ಯ!

ಕಾಲು ಸೋತಿತೆಂದು, ಕತ್ತಲಾಯಿತೆಂದು, ಜಯದೇವ ಹಿಂತಿರುಗಿದ. ಕೈಕಾಲು ತೊಳೆದುಕೊಂಡು ಕೊಠಡಿ ಸೇರಿ ಆತ ಜಯರಾಮ ಶೆಟ್ಟರು ಕೊಟ್ಟಿದ್ದ ದೊಡ್ಡ ಕಂದೀಲು ಹಚ್ಚುತಿದ್ದಂತೆ ನಾಗರಾಜ ಮೇಲಕ್ಕೆ ಓಡಿ ಬಂದ.

"ಎಲ್ಲಿಗೆ ಹೋಗಿದ್ರಿ ಸಾರ್ ನೀವು ಇಷ್ಟೊತ್ತು?"

"ವಾಕಿಂಗ್ ಹೋಗಿದ್ನೆಪ್ಪಾ."

"ಇವತ್ತು ನಮ್ಮ ಅಕ್ಕ ಬಂದ್ಲು ಸಾರ್."

"ಯಾವ ಅಕ್ಕ ನಾಗರಾಜ ?"

"ಆವತ್ತು ಹೇಳಿಲ್ಲಿಲ್ವೆ ಸಾರ್-ಹಾಸನಕ್ಕೆ ಕೊಟ್ಟಿದೇಂತ. ಅವಳೇನೆ... ...ಅಮ್ಮ ಯಾರಿಗೂ ಹೇಳ್ಕೂಡದು ಅಂದಿದಾರೆ-ಅಕ್ಕ ಅಲ್ಲಿ ಜಗಳ ಮಾಡ್ಕೊಂಡು ಬಂದಿದಾಳಂತೆ."

"ಮತ್ತೆ ನಂಗ್ಯಾಕೆ ಹೇಳ್ದೆ ?"

ಜಯದೇವನಿಗೆ ತಮಾಷೆಯಾಗಿ ತೋರಿತು ಇದೆಲ್ಲ.

"ನಿಮಗೆ ಹೇಳ್ದೆ ಏನ್ಸಾರ್—ನೀವು ಮೇಷ್ಟ್ರು !"

ಅದೂ ತವಮಾಷೆಯು ತಿಳಿವಳಿಕೆಯೇ.

"ಆಗಲೀಪ್ಪ...ನಿನಗೆ ಪಾಠ ಈಗ ಮಾಡೋಣವೋ ಬೆಳಗ್ಗೆ ಮಾಡೋಣವೋ ?"

"ಬೆಳಗ್ಗೆ ಮಾಡೋಣ ಸಾರ್. ನನಗೆ ಅಕ್ಕನ ಜತೇಲಿ ಮಾತಾಡ್ಬೇಕು."

ಜಯದೇವನಿಗೂ ಏಕಾಂತ ಬೇಕಾಗಿತ್ತು. ಆಗ ಪಾಠ ಹೇಳಿಕೊಡುವ ಮನಸ್ಸು ಆತನಿಗಿರಲಿಲ್ಲ. ಅವನು ಆರಾಮುಕುರ್ಚಿಯ ಮೇಲೆ ಕುಳಿತ.

"ಹಾಸನ್ದಲ್ಲಿ ಕಾಲೇಜಿದೆಯಂತೆ ಸಾರ್."

"ಇದೆ...."

"ಆದರೆ ಕಟ್ಟಡ ಅಷ್ಟೇನೂ ಚೆನ್ನಾಗಿಲ್ವಂತೆ..."

ಜಯದೇವ ಏನೂ ಹೇಳದೆ ಕಿಟಿಕಿಯ ಹೊರಗೆ ಆಕಾಶದಲ್ಲಿ ಕಾಣುತಿದ್ದ ತಾರೆಗಳನ್ನು ನೋಡುತ್ತ ಕುಳಿತ.

ನಾಗರಾಜನೂ ಜಯದೇವರ ನಿರಾಸಕ್ತಿಯನ್ನು ಗಮನಿಸಿ, "ಬರ್ತೀನಿ ಸಾರ್" ಎಂದು ಕೆಳಕ್ಕಿಳಿದು ಹೋದ.

ಆದರೆ ಸ್ವಲ್ಪ ಹೊತ್ತಿನಲ್ಲೆ ಹಿಂತಿರುಗಿ ಬರದಿರಲಿಲ್ಲ. ಅವನ ಕೈಯಲ್ಲಿ ಬೆಳ್ಳಿಯ ತಟ್ಟೆಯಲ್ಲಿ ಆರೆಂಟು ರಸಬಾಳೆ ಹಣ್ಣುಗಳಿದ್ದುವು.

"ಅಮ್ಮ ಕೊಟ್ಬಿಟ್ಟು ಬಾ ಅಂದ್ರು ಸಾರ್."

"ನನಗೆ ಊಟವಾಗಿದೆ ನಾಗರಾಜ."

"ಊಟವಾದ್ಮೇಲೆ ಅಲ್ವೆ ಸಾರ್ ಹಣ್ಣು ತಿನ್ನೋದು ?"

ತಟ್ಟೆಯನ್ನು ಹಾಗೆಯೇ ಅಲ್ಲಿ ಇರಿಸುವುದರಲ್ಲಿದ್ದ ನಾಗರಾಜನನ್ನು ತಡೆದು, ಹಣ್ಣುಗಳನ್ನೆತ್ತಿಕೊಂಡು ತಟ್ಟೆಯನ್ನು ಜಯದೇವ ಹಿಂದಕ್ಕೆ ಕಳುಹಿಸಿದ.

ಎರಡು ಹಣ್ಣುಗಳು ಆಹಾರವಾದುವು. ಒಂದು ಲೋಟ ನೀರು ಪಾನೀಯವಾಯಿತು. ಹಾಸಿಗೆ ಬಿಡಿಸಿಕೊಂಡು ದೀಪ ಆರಿಸಿ, ದಿಂಬಿಗೆ ಜಯದೇವ ತಲೆಯೂನಿಸಿದ.

ಕೆಳಗೆ ಹಜಾರದಲ್ಲಿ ಯಾರೋ ನಗುತಿದ್ದರು...ಹೆಂಗಸಿನ ನಗು... ಯುವತಿ....ನಾಗರಾಜನ ಅಕ್ಕನೇನೋ...

....ಬೆಂಗಳೂರಲ್ಲಿ ಅಷ್ಟು ಹೊತ್ತಿಗೆ ವೇಣು–ಸುನಂದ ಏನು ಮಾಡು ತ್ತಿರಬಹುದು ? ನಿದ್ದೆ ?...

...ಬಾಲ್ಯದ ನೆನಪುಗಳು...ಅಂತೂ ತಾನು ಉಪಾಧ್ಯಾಯನಾದೆ... ಎಂತಹ ಉಪಾಧ್ಯಾಯ !

ಕಣ್ಣುಗಳು ತೇವವಾದುವು. ಜಯದೇವ ಮುಗ್ಗುಲು ಹೊರಳಿ ಕತ್ತಲೆ ಯಲ್ಲಿ ಕಾಣದೆ ಇದ್ದ ಛಾವಣಿಯನ್ನೇ ದಿಟ್ಟಿಸಿ ನೋಡುತ್ತ ನಿದ್ದೆ ಹೋಗಲು ಯತ್ನಿಸಿದ.

*

*

# ೧೨

ವೆಂಕಟರಾಯರು ಮನೆ ಮಾಡಿದರು ಕೊನೆಗೊಮ್ಮೆ. ದೊಡ್ಡ ಸಂಸಾರ. ಹಿರಿಯ ಮಗನಿಗೆ ಕೆಲಸ ದೊರೆತಿತ್ತು. ಅನಂತರದ ಮಗಳು ಗಂಡನ ಮನೆಗೆ ಹೋಗಿದ್ದಳು. ಉಳಿದವರಿಬ್ಬರು ಮೈಸೂರಿನ ಕಾಲೇಜಿನಲ್ಲಿ ಓದುತಿದ್ದರು. ಅವರಾದ ಮೇಲೆ ನಡುವೆ ಅಂತರವಿದ್ದ ಹಾಗೆ ತೋರಿತು—ಸಾವಿನ ಸರ್ಪ ಫೂತ್ಕರಿಸಿ ನಿರ್ಮಿಸಿದ್ದ ಅಂತರ. ಆದರ ಬಳಿಕ, ನಾಲ್ವರು ಮಕ್ಕಳಿದ್ದರು-ಅವರಲ್ಲಿ ಮೂವರು ಹುಡುಗಿಯರು. ಕೊನೆಯದಿನ್ನೂ ಅಂಬೆಗಾಲಿಡುತಿದ್ದ ಹಸುಳೆ. ಇಷ್ಟು ಸಾಲದೆಂದು ವೆಂಕಟರಾಯರ ಕೈ ಹಿಡಿದ ಆ ಮಹಾತಾಯಿ ಮತ್ತೆ ಗರ್ಭಿಣಿಯಾಗಿದ್ದಳು. ಗಂಡನ ಮನೆಗೆ ಹೋದ ಮಗಳಿಗೂ ಈ ತಾಯಿಗೂ ಏಕಕಾಲದಲ್ಲೇ ಪ್ರಸವವಾಗುವ ಸನ್ನಿವೇಶ.

ಸಾಮಾನ್ಯವಾಗಿ ಇಷ್ಟೊಂದು ಸಂಸಾರ ಭಾರದ ನೊಗ, ಎಂತಹ ಹೋರಿಯನ್ನಾದರೂ ಬಡಕಲುಗೊಳಿಸಲೇಬೇಕು. ಆದರೆ ವೆಂಕಟರಾಯರು ಅದಕ್ಕೆ ಅಪವಾದವಾಗಿದ್ದರು.

ಅವರೇನೂ ಆಸ್ತಿವಂತರಾಗಿರಲಿಲ್ಲ. ಬರುತ್ತಿದ್ದುದಂತೂ 'ಹೊಟ್ಟೆಗಿದ್ದರೆ ಬಟ್ಟೆಗಿಲ್ಲ, ಬಟ್ಟೆಗಿದ್ದರೆ ಹೊಟ್ಟೆಗಿಲ್ಲ' ಎನ್ನುವಂತಹ ಅಲ್ಪ ಸಂಬಳ. ಆದರೂ ಈ ಸಂಸಾರ ರಥ ಸಾಗಿದ್ದ ರೀತಿ ಸೋಜಿಗದ ವಿಷಯವೇ ಆಗಿತ್ತು.

ಆದರೆ ದಿನ ಕಳೆದಂತೆ ಜಯದೇವನಿಗೆ ಹೊಸ ಮುಖ್ಯೋಪಾಧ್ಯಾಯರ ಜೀವನ ಕ್ರಮದ ನಿಜ ಪರಿಚಯವಾಗತೊಡಗಿತು.

ಊರಲ್ಲಿ ಶ್ರೀಮಂತರು ಯಾರಾದರೂ ಕಾಹಿಲೆ ಬಿದ್ದರೆ ವೆಂಕಟ ರಾಯರು, ಆ ರೋಗವನ್ನು ಗುಣಪಡಿಸಬಲ್ಲ ಮೈಸೂರಿನ ಒಬ್ಬರೇ ಒಬ್ಬ ರಾದ ನಿಷ್ಣಾತ ಡಾಕ್ಟರರ ಹೆಸರು ಹೇಳುತಿದ್ದರು. ಪರಿಚಯದ ಕಾಗದ ದೊಡನೆ ಕಳುಹಿಸಿ ಕೊಡುತಿದ್ದರು.

ಊರಲ್ಲಿ ಯಾವುದಾದರೂ ಲೇವಾದೇವಿ-ವ್ಯವಹಾರ ನಡೆದು ರಂಪ ವಾದರೆ, ಹೆಚ್ಚು ಹಣವಂತರಾದವರನ್ನು ಕರೆದು, ಬೆಂಗಳೂರಿನ ಪ್ರಮುಖ ಲಾಯರೊಬ್ಬರನ್ನು ಕಂಡು ಬರುವಂತೆ ಸಲಹೆ ಮಾಡುತಿದ್ದರು.

ಈ ಪರೋಪಕಾರದಿಂದ ಅವರಿಗೂ ಲಾಭವಿದ್ದುದು ಸ್ಪಷ್ಟವಾಗಿತ್ತು. ವಿದ್ಯಾರ್ಥಿಗಳಿಗಲ್ಲದೇ ಹೋದರೂ ವೆಂಕಟರಾಯರು ಬೇಗನೆ 'ಊರಿನವರಿಗೆ' ಬೇಕಾದವರಾದರು. ಬ್ರಾಹ್ಮಣರು ಕೆಲವರ ದೃಷ್ಟಿಯಲ್ಲಿ ಅವರು, 'ಸಮರ್ಥನಾದ ಸ್ವಜಾತಿ ಬಾಂಧವ.' ಬೇರೆ ಹಲವರ ದೃಷ್ಟಿಯಲ್ಲಿ— 'ಬ್ರಾಹ್ಮಣನಾದರೂ ಒಳ್ಳೇ ನಂಬಿಗಸ್ಥ.' ಹೀಗೆಲ್ಲಾ ಒಂದೆಳೆ ಹಗ್ಗದ ಮೇಲೆ ಒಂಟಿ ಕಾಲಿನಲ್ಲಿ ನಿಂತು ಡೊಂಬರಾಟವಾಡಲು ಅಸಾಮಾನ್ಯವಾದ ಬುದ್ಧಿವಂತಿಕೆ ಅಗತ್ಯವಿತ್ತು. ಅದನ್ನು ಸಾಧಿಸಿಕೊಂಡಿದ್ದ ವೆಂಕಟರಾಯರಿಗೆ ಜೀವನ ನಿರ್ವಹಣ ದೊಡ್ಡ ಸಮಸ್ಯೆಯಾಗಿರಲಿಲ್ಲ.

ತರಗತಿಗಳಲ್ಲಿ ದಡ್ಡರಾಗಿದ್ದ ಹುಡುಗರೇನಾದರೂ ಶ್ರೀಮಂತರಾಗಿದ್ದರೆ ಅವರ ಮನೆಗಳಿಂದ ತರಕಾರಿ ಹಣ್ಣು ಹಂಪಲು ಅದು-ಇದು, ಬರುತಿದ್ದುವು.

ಅಷ್ಟರಲ್ಲೇ ಚಿಕ್ಕ ಪರೀಕ್ಷೆ ಹತ್ತಿರ ಬಂತು. ಒಮ್ಮೆಲೆ ಮುಖ್ಯೋಪಾಧ್ಯಾಯರು, ರಂಗರಾಯರ ಆಡಳಿತದ ಕಾರಣದಿಂದಾಗಿ ವಿದ್ಯಾರ್ಥಿಗಳ ಮಟ್ಟ ಏನೇನೂ ತೃಪ್ತಿಕರವಾಗಿಲ್ಲ ಎಂಬ ಅಂಶವನ್ನು ಕಂಡು ಹಿಡಿದರು. ಅವರ ಮನಸ್ಸಿನಲ್ಲಿ ಏನಿತ್ತೆಂಬುದು ಮೊದಮೊದಲು ಜಯದೇವನಿಗೆ ಗೊತ್ತಾಗಲಿಲ್ಲ, ನಂಜುಂಡಯ್ಯನೊಬ್ಬನೇ ತಮ್ಮೊಳಗೆ ನಕ್ಕು ಸಿಗರೇಟು ಸುಟ್ಟರು.

"ನಮ್ಮನೇಲಿ ಮೂರನೆ ಮತ್ತು ನಾಲ್ಕನೆ ತರಗತಿ ಹುಡುಗರಿಗೆ ಎರಡು ಸ್ಪೆಷಲ್ ಕೋಚಿಂಗ್ ಕ್ಲಾಸು ಇಟ್ಕೊಳ್ಳೋಣಾಂತ ಮಾಡಿದೀನಿ" ಎಂದು ವೆಂಕಟರಾಯರು ಕೆಲವು ದಿನಗಳಲ್ಲಿ ಆಫೀಸು ಕೊಠಡಿಯಲ್ಲಿ ಜಾಹೀರು ಮಾಡಿದರು.

ಹೊಗೆಯುಗುಳಿ ನಸು ನಕ್ಕರು ನಂಜುಂಡಯ್ಯ:

"ನಿಮ್ಮ ಸಹನೆ ಮೆಚ್ಚಬೇಕಾದದ್ದೇ. ಖಂಡಿತವಾಗಿ ಮಾಡಿ ಸಾರ್. ನನಗೆ ಮಾತ್ರ, ಪ್ರತ್ಯೇಕ ಪಾಠ ಹೇಳ್ಕೊಡೋದೂಂದ್ರೆ ತಲೆನೋವು."

"ಮೊದಲ್ನೇ ಎರಡ್ನೇ ತರಗತಿ ಹುಡುಗರು ಯಾರಾದ್ರೂ ಬೇಕು ಅಂದ್ರೆ ನೀವೂ ಒಂದೆರಡು ಪಾಠ ಇಟ್ಕೊಳ್ಳಿ ಜಯದೇವ."

ಜಯದೇವ ತಲೆದೂಗಿ ಸುಮ್ಮನಾದ. ಇದು ವಿಶೇಷ ಸಂಪಾದನೆಯ ಮಾರ್ಗವೆಂಬುದು ಅವನಿಗೆ ತಿಳಿಯಿತು. ಪರೀಕ್ಷೆಯಲ್ಲಿ ಒಳ್ಳೆಯ ಮಾರ್ಕು ದೊರೆಯಬೇಕಾದರೆ, ಇಲ್ಲವೆ ತೇರ್ಗಡೆಯಾದರೂ ಆಗಬೇಕಾದರೆ, ಆ ಉಪಾಧ್ಯಾಯರಿಂದಲೇ ಪಾಠ ಹೇಳಿಸಿಕೊಳ್ಳಬೇಕು. ಹುಡುಗರು

ಖಾಸಗಿಯಾಗಿ ಪಾಠ ಹೇಳಿಸಿಕೊಳ್ಳುವಂತೆ ಮಾಡಬೇಕಾದರೆ, ತರಗತಿ ಯಲ್ಲಿ ಚೆನ್ನಾಗಿ ಹೇಳಿಕೊಡಬಾರದು! ಶಾಲೆಯಲ್ಲಿ ದೊರೆಯುವ ಸಂಬಳಕ್ಕಿಂತಲೂ ಹೆಚ್ಚನ್ನು ಖಾಸಗಿ ಪಾಠಗಳಿಂದಲೇ ಸಂಪಾದಿಸುವ ಉಪಾಧ್ಯಾಯರೆಷ್ಟೊಂದು ಜನರಿಲ್ಲ!....ಜಯದೇವ ಇಂಟರ್ ಓದುತಿದ್ದಾಗ ಲೊಮ್ಮೆ ನಾಲ್ಕಾರು ಹುಡುಗರ ಮುಂದೆ ಭೌತಶಾಸ್ತ್ರದ ಪ್ರಾಧ್ಯಾಪಕರು ನಗೆಯಾಡುತ್ತ ಹೇಳಿದ್ದರು: 'ನಾವೆಲ್ಲ ನಿಶ್ರಾಂತಿ ತಗೋಳೋಕೆ ಇಲ್ಲಿಗೆ ಬರ್‍ತೀವಿ. ನಾವು ಪಾಠ ಹೇಳೋದೆಲ್ಲಾ ಕ್ಲಾಸಿಗೆ ಬರೋಕ್ಮುಂಚೆ ಮತ್ತು ಕ್ಲಾಸು ಮುಗಿದ್ಮೇಲೆ.'

ಹಿಂದೆ ಜಯದೇವನೂ ಖಾಸಗಿಯಾಗಿ ಪಾಠ ಹೇಳಿಕೊಟ್ಟುದಿತ್ತು. ಆದರೆ ಶಾಲಾ ಉಪಾಧ್ಯಾಯನಾಗಿ ಆತ ಹಾಗೆ ಮಾಡಿರಲಿಲ್ಲ.

ವೆಂಕಟರಾಯರಾದರೋ ತಾತ್ವಿಕ ಮಟ್ಟದಲ್ಲೇ ಇದ್ದರು:

"ವಿದ್ಯಾರ್ಥಿಗಳ ಸಂಖ್ಯೆ ಬೆಳೀತಾ ಇದೆ. ವೈಯಕ್ತಿಕವಾಗಿ ಒಬ್ಬೊಬ್ಬ ವಿದ್ಯಾರ್ಥಿಯ ವಿಷಯದಲ್ಲೂ ಗಮನ ಕೊಡೋದಕ್ಕೆ ಆಗೋದೇ ಇಲ್ಲ."

"ಹೌದು, ಹೌದು."

ಆದರೆ ಅದಕ್ಕಿದ್ದ ಪರಿಹಾರವೇನು? ಹಣದ ದೃಷ್ಟಿಯಿಂದ ನಡೆಯುವ ಮನೆ-ಪಾಠಗಳೆ?

ಹುಡುಗರೇನೋ ಬಂದು ಜಯದೇವನನ್ನು ಕೇಳಿದರು:

"ಸಾರ್, ಟ್ಯೂಷನ್ ಹೇಳ್ಕೊಡೋಕೆ ಆಗುತ್ಯೆ ಸಾರ್?"

"ನನಗೆ ಪುರಸತ್ತಿಲ್ಲ. ಕ್ಲಾಸ್ನಲ್ಲೇ ಕೇಳಿ, ಹೇಳ್ತೀನಿ. ಬೇಕಾದ್ರೆ ಶಾಲೆ ಬಿಟ್ಮೇಲೆ ಇಲ್ಲೇ ಕೇಳಿ."

...ಮಧ್ಯಾಹ್ನದ ಬಿಡುವಿನಲ್ಲಿ ನಾಲ್ಕನೆ ತರಗತಿಯ ಪ್ರಭಾಮಣಿ ಬಂದಳು-ಪ್ರತಿಭಾವಂತೆ. ಅವಳಿಗೇನೂ ಮನೆ-ಪಾಠ ಬೇಕಾಗಿರಲಿಲ್ಲ. ಆದರೆ...

"ಮನೇಗ್ಬಂದು ಪಾಠ ಹೇಳ್ಕೊಡೋಕೆ ಆಗುತ್ಯೆ ಅಂತ ಇಂದಿರಾನ ತಾಯಿ ಕೇಳಿದ್ರು ಸಾರ್."

ಇಂದಿರಾ—ದೊಡ್ಡ ಹುಡುಗಿ. ಆಕೆಯ ನೋಟದೆದುರು ಹಲವೊಮ್ಮೆ ಜಯದೇವ ಅಧೀರನಾಗಿದ್ದ. ಹಾಜರಿ ಪುಸ್ತಕದಲ್ಲಿ ಹುಡುಗಿಯರ ಹೆಸರು ಗಳನ್ನು ಓದಬೇಕಾಗಿ ಬಂದಾಗಲೂ ಅಷ್ಟೆ. ಇಂದಿರೆಯ ಹೆಸರಿದ್ದುದು

ಕೊನೆಯಲ್ಲಿ. 'ಪಿ. ಇಂದಿರಾ' ಎಂದು ಕರೆದರೂ ತಲೆಯೆತ್ತಿ ಆಕೆಯನ್ನು ನೋಡುತ್ತಿರಲಿಲ್ಲ. ಸ್ವರ ಕೇಳಿದೊಡನೆ ಹಾಜರಿಯ ಗುರುತು ಹಾಕುತಿದ್ದ. ಉತ್ತರ ಬರದೇ ಇದ್ದಾಗ ಮಾತ್ರ ತಲೆಯೆತ್ತಿ ಕೇಳುತಿದ್ದ :

"ಯಾಕ್ಬಂದಿಲ್ಲ ? ರಜೆ ಅರ್ಜಿಯಾದರೂ ಕಳಿಸ್ಬಾರ್ದೇ?"

ಈಗ ಅದೇ ಹುಡುಗಿಯ ತಾಯಿ ಹೇಳಿ ಕಳುಹಿಸಿದ್ದರು:

"ನಮ್ಮ ಮನೆಗೆ ಬಂದು ಪಾಠ ಹೇಳಿ ಕೊಡಬಹುದೇ ?"

ಆ ವರೆಗೂ ಪುರಸತ್ತಿಲ್ಲವೆನ್ನುತ್ತ ಬಂದಿದ್ದ ಜಯದೇವನ ಮನಸ್ಸು ಹೇಳಿತು :

'ಒಪ್ಪಿಕೋ....ಒಪ್ಪಿಕೋ...'

ಮನಸಿನೊಳಗೆ ಕ್ಷಣಕಾಲ ನಡೆದ ದ್ವಂದ್ವ. ಆ ವಿಚಾರಗಳ ನಡುವೆ ಸುನಂದೆಯ ಮುಖ ಕಾಣಿಸುತಿತ್ತು...ವಯಸ್ಸಿನಲ್ಲಿ ದೊಡ್ಡವಳಾಗಿದ್ದ ಹುಡುಗಿಯೊಬ್ಬಳಿಗೆ ಪಾಠ ಹೇಳಿಕೊಡುವ ಅವಕಾಶ...ಆ ಸಾಮೀಪ್ಯ... ಇಂದಿರೆಯ ಚಂಚಲ ದೃಷ್ಟಿ......ಜಯದೇವನ ಮನಸ್ಸು ಕುತೂಹಲಿ ಯಾಗಿತ್ತು. ಅದೊಂದು ಪ್ರಯೋಗ—ಒಪ್ಪಿಕೋ, ಎನ್ನುತಿತ್ತು. ಜತೆಯಲ್ಲೆ, ಹುಡುಗಿಗೆ ಪಾಠ ಹೇಳಿಕೊಡಲು ಹಿಂಜರಿಯುವ ತಾನೇನು ಹಳೆಯ ಕಾಲದ ಮಡಿ ಸಂಪ್ರದಾಯವಂತನೆ—ಎಂದು ಪ್ರಶ್ನಿಸಿತು. ಆದರೆ ಆತನ ಒಳದೃಷ್ಟಿ ಸುನಂದೆಯ ಮುಖವನ್ನೇ ನಿರೀಕ್ಷಿಸುತ್ತಾ 'ಏನು ಮಾಡಲಿ?' ಎಂದು ಕೇಳು ತಿತ್ತು. ಆಕೆ ಮಾತ್ರ ಮೌನವಾಗಿದ್ದಳು. ಮುಗ್ಧ ತುಟಿಗಳು ಅರಳದ ಮೊಗ್ಗುಗಳಾಗಿ ಬಿಗಿದುಕೊಂಡು ಸುಮ್ಮನಿದ್ದರೂ ಕಣ್ಣುಗಳು ನಗುತಿದ್ದುವು.

ಪ್ರಭಾಮಣಿಗೆ ತಿಳಿಯದಂತೆಯೇ ನಿಟ್ಟುಸಿರು ಬಿಟ್ಟು ಜಯದೇವನೆಂದ :

"ನನಗೆ ಬಿಡುವೇ ಇಲ್ಲ ಪ್ರಭಾ. ಅಲ್ದೆ, ನಾಲ್ಕನೆ ತರಗತಿಯವರಿಗೆ ಹೆಡ್ಮೇಷ್ಟ್ರೇ ಕೋಚಿಂಗ್ ಕ್ಲಾಸ್ ತಗೋತಾರೆ."

"ಅದು ಅವರ್ಮನೇಲಿ. ಅಲ್ಲಿಗೆಲ್ಲಾ ಇಂದಿರಾನ ಕಳಿಸಿಕೊಡಲ್ವಂತೆ. ನೀವು ಅವರ ಮನೆಗೇ ಬಂದು ಪಾಠ ಹೇಳ್ಬೇಕಂತೆ. ನೀವು ಕೇಳಿದ ಫೀಸು ಕೊಡ್ತಾರಂತೆ. ಸಾಧ್ಯವೆ ಸಾರ್ ? ಕೂಗ್ಲಾ ಇಂದಿರಾನ ?"

"ಬೇಡ ಪ್ರಭಾ. ನಿಜವಾಗ಼್ೂ ನನಗೆ ಪುರಸತ್ತಿಲ್ಲ."

"ಯಾಕೆ, ನೀವೂ ಪರೀಕ್ಷೆ ಕಟ್ಟಿದೀರಾ ಸಾರ್ ?"

"ಹೂಂ. ಹೂಂ. ಪರೀಕ್ಷೆ ಕಟ್ಟಿದೀನಿ."

ತುಂಟ ಹುಡುಗಿ ಪ್ರಭಾ ಕೇಳಿದಳು :

"ಎಷ್ಟು ರೂಪಾಯಿ ಪರೀಕ್ಷೆ ಸಾರ್ ?"

"ಎಷ್ಟು ರೂಪಾಯಿದ್ದೂಂತ ಹೇಳೋ ಹಾಗೇ ಇಲ್ಲ ಪ್ರಭಾ !"

ಹೆಚ್ಚು ತಡವಿಲ್ಲದೆ ವೆಂಕಟರಾಯರ ವಿಶೇಷ ತರಗತಿಗಳು ಆರಂಭ ವಾದುವು. ಜಯದೇವ ಮಾತ್ರ ಸುಮ್ಮನಿದ್ದ.

ನಂಜುಂಡಯ್ಯ ಕೆದಕಿ ಕೇಳಿದರು:

"ನಿಮ್ಮದು ಬರೇ ಆದರ್ಶವಾದ ಜಯದೇವ."

"ಇದ್ದೀತು."

"ಈ ರೀತಿಯ ಮನೆಪಾಠಗಳಿಂದ ವಿದ್ಯಾಭ್ಯಾಸ ಪದ್ಧತಿ ಸುಧಾರಿಸೋ ದಿಲ್ಲ ಅನ್ನೋದು ನಿಮ್ಮ ಅಭಿಪ್ರಾಯ, ಅಲ್ವೆ?"

"ಹೌದು ಸಾರ್."

"ಹಾಗಾದ್ರೆ ಇಂಥ ಪರಿಸ್ಥಿತೀಲಿ ನೀವು ಯಾಕೆ ಉಪಾಧ್ಯಾಯರಾದಿರಿ ಹೇಳಿ?"

"ಈ ಪ್ರಶ್ನೆಗೆ ಉತ್ತರ ಸುಲಭವಲ್ಲ."

ನಂಜುಂಡಯ್ಯ ಸಿಗರೇಟು ಹಚ್ಚಿ ಹೊಗೆಯನ್ನೆ ದಿಟ್ಟಿಸುತ್ತಾ ಯೋಚಿಸಿ ಹೇಳಿದರು:

"ನಿಮ್ಮ ಮನಸ್ನಲ್ಲಿ ಏನಿದೆ ಅನ್ನೋದನ್ನ ನಾನು ಬಲ್ಲೆ. ನನ್ನ ಅಭಿಪ್ರಾಯವೂ ನಿಮ್ಮ ಅಭಿಪ್ರಾಯವೂ ಒಂದೇ ಎಂದರೆ ನಿಮಗೆ ಆಶ್ಚರ್ಯ ವಾದರೂ ಆದೀತು."

ಜಯದೇವನಿಗೆ ಆಶ್ಚರ್ಯವಾಗದೆ ಇರಲಿಲ್ಲ. ಅವನ ಮುಖ ಮುದ್ರೆ ಯನ್ನು ಗಮನಿಸಿ ನಂಜುಂಡಯ್ಯ ಮಾತು ಮುಂದುವರಿಸಿದರು:

"ಆದರೆ ಇದೆಲ್ಲಾ ಸುಧಾರಣೆಯಾಗೋದು ಸಾಧ್ಯವೇ ಇಲ್ಲಾಂತ ನನ್ನ ಅಭಿಪ್ರಾಯ. ಉಪಾಧ್ಯಾಯ ಸಂತೃಪ್ತ ಜೀವಿಯಾಗಿ ಇರ್ಬೇಕಾದ್ದು ಮೊದಲನೇದು. ಈಗ ಸಿಗೋ ಅಲ್ಪ ವೇತನದಲ್ಲಿ ಅದು ಹೇಗೆ ಸಾಧ್ಯ ? ದುಡ್ಡಿಲ್ಲ-ಅನ್ನುತ್ತೆ ಸರಕಾರ. ಹಾಗಾದರೆ ಉಪಾಧ್ಯಾಯನಾದ ಮನುಷ್ಯ ಉಪವೃತ್ತಿ ಇಟ್ಟುಕೊಳ್ಳೀಬೇಕು. ಪರಿಣಾಮ ಗೊತ್ತೇ ಇದೆ... ಈಗ ನಿಮ್ಮ ವಿಷಯಾನೇ ತಗೊಳ್ಳಿ. ನೀವು ಒಬ್ಬಂಟಿಗ. ಸಾಯೋವರೆಗೂ ಹೀಗೇ

ಇರ್ತೀರೇನು? ನಾಳೆ ಮದುವೆ ಆಗ್ತೀರ. ಆಗ ಎಲ್ಲಿಗೆ ಸಾಕು ನಿಮಗೆ ಬರೋ ೪೦+೧೫. ಆಗ಼್್ಲೊ ಟ್ಯೂಷನ್ ಒಲ್ಲೇಂತ ಹಟ ತೊಡ್ತೀರೇನು?"

ಜಯದೇವನಿಂದ ಉತ್ತರವನ್ನು ನಿರೀಕ್ಷಿಸಿ ನಂಜುಂಡಯ್ಯ ಮಾತು ತಡೆದರು. ಅನುಭವ ಅವರ ಬಾಯಲ್ಲಿ ಸತ್ಯಾಂಶವನ್ನೆ ನುಡಿಸಿತ್ತು. ಅದನ್ನು ಜಯದೇವ ಅಲ್ಲಗಳೆಯುವುದು ಸಾಧ್ಯವಿತ್ತೆ? ಆತ ನಿರುತ್ತರನಾದುದನ್ನು ಕಂಡು ಸಂತೋಷಪಡುತ್ತ ನಂಜುಂಡಯ್ಯನೆಂದರು:

"ನನ್ನ ವಿಷಯವೇ ತಗೊಳ್ಳಿ. ನನಗೇನೋ ಆಸ್ತಿಪಾಸ್ತಿ ಇದೆ. ಈ ಸಂಬಳಾನ ನಾನು ನೆಚ್ಕೋ ಬೇಕಾದ್ದಿಲ್ಲ. ಆದರೆ ನಾಳೆ ದಿವಸ ನಾವು ಖಾಸಗಿಯಾಗಿ ಹೈಸ್ಕೂಲು ಷುರು ಮಾಡ್ದಾಗ? ನಾನು ಗೌರವದ ಕೆಲಸಾಂತ ಮುಖ್ಯೋಪಾಧ್ಯಾಯನಾಗ್ಬಹುದು. ಬೇರೆಯವರೂ ಹಾಗೆ ಬರ್ತಾರೇನು? ಅವರಿಗೆ ನ್ಯಾಯವಾಗಿಯೇ ಸಂಬಳ ಕೊಡ್ಬೇಕು. ಆದರೆ ಎಷ್ಟೂಂತ ಕೊಡೋದಕ್ಕಾದೀತು? ಖಾಸಗಿ ಸಂಸ್ಥೆ. ಸರಕಾರದ ಕೈಲಿ ಇರೋವಷ್ಟು ದುಡ್ಡು ನಮ್ಕೈಲಿ ಇರೋದಿಲ್ಲ ಆಗ?...ಹೀಗಿದೆ ನೋಡಿ ವಿಷಯ..."

ಹಾಗಿತ್ತು ವಿಷಯ. ಮಾತು ಎಲ್ಲಿಗೋ ಸಾಗಿ ಮುಂದೆ ನಂಜುಂಡಯ್ಯನವರ ನೇತೃತ್ವದಲ್ಲಿ ಎಂದಾದರೊಂದು ದಿನ ಸ್ಥಾಪಿತವಾಗಬೇಕಾದ ಹೈಸ್ಕೂಲಿನ ತನಕ ಬಂದು ನಿಂತಿತು.

ಆ ಚರ್ಚೆ ಅಷ್ಟು ಸಾಕೆಂದು ನಂಜುಂಡಯ್ಯನೂ ಭಾವಿಸಿದರು. ಗುಣದಲ್ಲಿ, ವಿದ್ವತ್ತಿನಲ್ಲಿ, ವೆಂಕಟರಾಯರಿಗಿಂತ ತಾವು ಮೇಲು ಎಂದು ಅವರು ಜಯದೇವನಿಗೆ ತೋರಿಸಿ ಕೊಟ್ಟಿದ್ದರು. ಅಷ್ಟರಿಂದಲೇ ಅವರಿಗೆ ತೃಪ್ತಿಯಾಯಿತು.

ಗೆಳೆತನಕ್ಕೂ ತನ್ನ ಹೃದಯದಲ್ಲಿರುವ ಸ್ಥಾನ ಕಡಮೆಯಾದುದೇನೂ ಅಲ್ಲವೆಂಬುದನ್ನು ತೋರಿಸುವಂತೆ ನಂಜುಂಡಯ್ಯ ಕೇಳಿದರು:

"ನೀವು ಬಹಳ ಇಳಿದ್ಹೋಗ್ಬಿಟ್ಟಿದೀರಿ ಜಯದೇವ್."

"ಹೌದೆ ಸಾರ್?"

"ಹೌದು. ಯಾಕೆ, ಮೈ ಚೆನ್ನಾಗಿಲ್ವೆ?"

"ಇದೆಯಲ್ಲ!"

"ಮತ್ತೆ, ಹೋಟ್ಲಿನ ಊಟ ಸೇರೊಲ್ವೆ ?"

"ಸೇರದೆ ಏನು ? ತಕ್ಕಮಟ್ಟಿಗೆ ಚೆನ್ನಾಗಿಯೇ ಮಾಡ್ತಾರೆ."

"ಹಾಗಾದರೆ, ಜಯರಾಮ ಶೆಟ್ಟರ ಮನೇಲಿ ಅನುಕೂಲ ವಾಗಿಲ್ವೇನೊ?"

"ಓ? ಅಲ್ಲೇನ್ಸಾರ್ ಅನುಕೂಲವಿಲ್ದೆ!"

"ಏನೋಪ್ಪ!"

# ೧೩

ಜಯರಾಮಶೆಟ್ಟರ ಮನೆಯಲ್ಲಿ ಎಲ್ಲ ಅನುಕೂಲತೆಗಳೂ ಇದ್ದುವು. 'ಏನೋಪ್ಪ' ಎಂದು ಶಂಕಿಸುವ ಅವಶ್ಯಕತೆಯೇ ಇರಲಿಲ್ಲ. ನಾಗರಾಜನ ಅಕ್ಕ ಶ್ಯಾಮಲಾ ಮನೆಗೆ ಬಂದ ಮೇಲೆ ಉಪಾಧ್ಯಾಯರ ಬಗೆಗೆ ಮನೆಯವರು ಆದರ ತೋರಿಸುವುದೂ ಹೆಚ್ಚಿತು.

ಹುಡುಗ ಬಂದು ಅಕ್ಕನಿಗಾಗಿ ಕತೆ ಪುಸ್ತಕಗಳನ್ನು ಕೇಳಿ ಒಯ್ಯುತ್ತಿದ್ದ. ತನ್ನ ಅಚ್ಚುಮೆಚ್ಚಿನ ಸಾಹಿತಿಗಳ ಹಲವಾರು ಕೃತಿಗಳನ್ನು ಬೆಂಗಳೂರಿನಿಂದ ಹೊತ್ತು ತಂದಿದ್ದ ಜಯದೇವನಿಗೆ ಪುಸ್ತಕ ಎರವಲು ನೀಡುವುದೇನೂ ಕಷ್ಟವಾಗಲಿಲ್ಲ. ಆದರೆ ಆ ಪುಸ್ತಕಗಳೆಲ್ಲ, ಹಾಳೆ ಕಿವಿ ಮಡಚಿಕೊಂಡೋ ನೀಳವಾದ ಸುವಾಸನೆಯ ತಲೆಗೂದಲಿನೊಡನೆಯೋ ಕುಂಕುಮ ಪೌಡರುಗಳನ್ನು ಬಳಿದುಕೊಂಡೋ ವಾಪಸು ಬರುತಿದ್ದುವು. ಪುಸ್ತಕಗಳಿಗೆ ಆ ರೀತಿ ಆಗುತಿದ್ದ ಹಿಂಸೆಯನ್ನು ಜಯದೇವ ಕಷ್ಟಪಟ್ಟು ಸಹಿಸಿದ.

ಆದರೆ, ಹಿಂಸೆ ಅವನನ್ನೂ ಬಲಿ ತೆಗೆದುಕೊಳ್ಳತೊಡಗಿದಾಗ ಜಯದೇವನಿಗೆ ಗಾಬರಿಯಾಯಿತು. ಸುಂದರಿಯಾಗಿದ್ದಳು ನಾಗರಾಜನ ಅಕ್ಕ ಶ್ಯಾಮಲಾ. ಹೃಷ್ಟಪುಷ್ಟವಾದ ಮೈ. ಗೌರಾಂಗಿಯಲ್ಲದೇ ಹೋದರೂ ತಾನು ಶಕ್ತೆ ಸಮರ್ಥೆ ಎಂಬುದನ್ನು ಸಾರಿಹೇಳುವ ಗುಣ ವಿಶೇಷಗಳಿದ್ದುವು ಆಕೆಯ ರೂಪಕ್ಕೆ. ಗಂಡನೊಡನೆ ಯಾತಕ್ಕೋಸ್ಕರ ಜಗಳವಾಡಿ ಬಂದಳೋ ಎಂದು ಜಯದೇವ ಚಿಂತಿಸಿದ.

ನಾಗರಾಜ ದಿನವೂ ಅಕ್ಕನ ವಿಷಯ ಏನಾದರೊಂದು ಮಾತನಾಡದಿರುತ್ತಿರಲಿಲ್ಲ.

"ಬೆಂಗಳೂರಲ್ಲಿ ಎಷ್ಟು ಸಿನಿಮಾ ಥಿಯೇಟರುಗಳಿದ್ದಾವೆ ಹೇಳಿ ಸಾರ್."

"ಗೊತ್ತಿಲ್ವಲ್ಲಾ..."

"ಅರವತ್ಮೂರು. ನಂಗೊತ್ತಿದೆ. ಅಕ್ಕ ಹೇಳಿದ್ಲು. ಮದುವೆ ಆದ್ಮೇಲೆ ಅಲ್ಲಿ ನಮ್ಮ ಸಂಬಂಧಿಕರ ಮನೇಲಿ ಒಂದು ತಿಂಗಳು ಇದ್ಲಂತೆ."

ಮತ್ತೊಮ್ಮೆ ಬೇರೆ ರೀತಿಯ ಪ್ರಶ್ನೆ.

"ನಿಮ್ಮೂರು ಖುದ್ದು ಬೆಂಗಳೂರೇ ಸಾರ್?"

"ಹೌದು, ಯಾಕಪ್ಪಾ?"

"ಅಲ್ಲ ಅಂದ್ಲು ನಮ್ಮಕ್ಕ. ನಿಮ್ಮನ್ನ ನೋಡಿದ್ರೆ ಬೆಂಗಳೂರ್‍ನೋರ ಹಾಗೆ ಕಾಣ್ಸೋದಿಲ್ವಂತೆ. ಯಾವುದೋ ಹಳ್ಳಿಯವರಿರಬಹುದೂಂತ ನಮ್ಮಕ್ಕ ಅಂದ್ಲು."

ತನ್ನ ಅಕ್ಕನ ಊಹೆ ಸರಿಯಾಗಲಿಲ್ಲವೆಂದು ನಾಗರಾಜನಿಗೆ ನಿರಾಸೆಯಾದರೆ, ಆ ಅಕ್ಕನ ಅಭಿಪ್ರಾಯ ಕೇಳಿ ಜಯದೇವನ ಮೈ ಉರಿಯಿತು. ಕಿವಿಗಳು ಕೆಂಪಗಾದುವು. ಸೂಚ್ಯ ಮಾತುಗಳಲ್ಲಿ ಆ ಶ್ಯಾಮಲಾ ತನ್ನನ್ನು ಅವಮಾನಿಸುತಿದ್ದಳೆಂದು, ಕೆಣಕುತಿದ್ದಳೆಂದು, ಅವನಿಗೆ ಹೊಳೆಯದೆ ಹೋಗಲಿಲ್ಲ.

"ನಿಮ್ಮಕ್ಕ ಹೇಳಿದ್ದು ಸರಿ ಕಣೋ. ನಾನು ಹುಟ್ಟಿದ್ದು ಕಾನಕಾನಹಳ್ಳೀಲಿ."

ಅಕ್ಕ ಸರಿಹೇಳಿದಳೆಂದು ನಾಗರಾಜನಿಗಾದ ಸಂತೋಷದ ಭರದಲ್ಲಿ ಜಯದೇವನ ಧ್ವನಿಯಲ್ಲಿದ್ದ ಸಿಡುಕು ಅವನ ಗಮನಕ್ಕೆ ಬರಲೇ ಇಲ್ಲ. ಅಕ್ಕನಿಗೆ ಆ ವಿಷಯ ತಿಳಿಸಲು ಆತ ಕೆಳಕ್ಕಿಳಿದು ಹೋದ.

ಒಮ್ಮೊಮ್ಮೆ ಕೊಠಡಿಯಿಂದ ಇಳಿದು ಬರುತಿದ್ದಾಗ ಶ್ಯಾಮಲೆಯ ದರ್ಶನವಾಗುತಿತ್ತು. ಆರಂಭದಲ್ಲಿ ಆಕೆ ಗಂಭೀರಳಾಗಿಯೇ ಇದ್ದಳು. ಬಳಿಕ ಯಾರೂ ಸಮೀಪದಲ್ಲಿ ಇಲ್ಲದೆ ಇದ್ದಾಗ ಮುಗುಳ್ನಗತೊಡಗಿದಳು. ಈ ಸಂಕೋಚದ ಕಳ್ಳತನದ ನಗೆವಿನಿಮಯದಿಂದಲೆ ಹೆಚ್ಚುತಿತ್ತು ಜಯದೇವನೊಳಗಿನ ಕಸಿವಿಸಿ. ನಮ್ಮವರೇ ಹೀಗೆ; ನೇರವಾಗಿ ಮಾತನಾಡಿ ನಿಸ್ಸಂಕೋಚವಾಗಿ ಬೆರೆತರೆ ಯಾವ ಯೋಚನೆಯೂ ಇಲ್ಲ; ಅದರ ಬದಲು ಬಾಗಿಲ ಮರೆಯಲ್ಲಿ ಬೇರೆಯವರ ಕಣ್ಣು ತಪ್ಪಿಸಿ—ಥೂ... ಜಯದೇವ ಎಲ್ಲರನ್ನೂ ನಿಂದಿಸಿದ; ತನ್ನನ್ನೂ ನಿಂದಿಸಿಕೊಂಡ. ತಾನು ಎಚ್ಚರದಿಂದಿರಬೇಕು; ಉಪಾಧ್ಯಾಯನಾಗಿ ಇರಲು ಬಂದವನು ಮಾನವಾಗಿ ಮರ್ಯಾದೆಯಾಗಿ ಬಾಳಬೇಕು; ಯಾರಾದರೂ ಬೇಕುಬೇಕೆಂದೇ ಏನಾದರೂ ಅಪಾರ್ಥ ಕಲ್ಪಿಸಿದರೆ ಎಂತಹ ಪ್ರಮಾದವಾದೀತು! ...ಎಂದೆಲ್ಲ ಯೋಚಿಸಿದ.

ಆ ಸಂದರ್ಭಗಳಲ್ಲೆಲ್ಲ ಅನಿವಾರ್ಯವಾಗಿಯೆ ಅವನಿಗೆ ವೇಣು–ಸುನಂದೆಯರ ನೆನಪಾಗುತಿತ್ತು. ಅಂತಹ ದಿನಗಳಲ್ಲಿ ನೆಮ್ಮದಿ ಇಲ್ಲದ ಮನಸಿನಿಂದ ಆತ ಶಾಲೆಗೆ ಹೋಗುತಿದ್ದ.

ಪತ್ರಿಕೆಗಳ ತುಂಬಾ ವಿದ್ಯಾಭ್ಯಾಸದ ಹೊಸ ಸುಧಾರಣೆಗಳ ವಾರ್ತೆಯೇ ಬರುತಿತ್ತು. ತೀವ್ರ ಚರ್ಚೆಗಳು, ಭಾಷಣಗಳು....

ವಿದ್ಯಾಭ್ಯಾಸದಲ್ಲಿ ಸುಧಾರಣೆಯೆಲ್ಲ ದೂರದ ಕನಸು ಎಂದು ಭಾವಿಸಿದ್ದವರು ಕಣ್ಣು ಹೊಸಕಿಕೊಂಡು, ಹೊತ್ತು ಎಷ್ಟೀಗ—ಎಂದು ಕೇಳುವಂತಾಯಿತು.

ಜಯದೇವನೂ ಆಸಕ್ತಿವಹಿಸಿ ಸಮೂಲಾಗ್ರವಾಗಿ ವಿವರಗಳನ್ನು ಅಭ್ಯಾಸ ಮಾಡಿದ. ಮೊದಲಹಂತದಲ್ಲಿ ಆರುವರ್ಷಗಳ ತನಕ ಹಳ್ಳಿಗಾಡಿನ ಶಿಕ್ಷಣ. ಆ ಬಳಿಕ ವಿದ್ಯಾರ್ಥಿಯನ್ನು ಸ್ವಾವಲಂಬಿಯಾಗಿ ಸ್ವಯಂಪೂರ್ಣನಾಗಿ ಮಾಡುವ ಯತ್ನ; ಮೆಟ್ರಿಕ್ ಪರೀಕ್ಷೆಯು ಬದಲು, ಕಾಲೇಜಿನ ಮೊದಲ ಎರಡು ವರ್ಷಗಳನ್ನೂ ಸೇರಿಸಿ ದ್ವಿತೀಯ ಹಂತದ ಏರ್ಪಾಟು. ಅಲ್ಲಿಯುವರೆಗೂ ಮಾತೃಭಾಷೆಯು ಮಾಧ್ಯಮ. ಆ ಬಳಿಕ ಪ್ರೌಢ ವಿದ್ಯಾಭ್ಯಾಸ....ಸರಿಯೋ ತಪ್ಪೋ—ಅಂತೂ ಅದು ಆಕರ್ಷಕವಾಗಿತ್ತು.

ನಂಜುಂಡಯ್ಯನ ವಿಮರ್ಶೆಯ ದೃಷ್ಟಿ ಬೇರೆಯೂ ಕೆಲ ವಿಷಯಗಳನ್ನು ಗುರುತಿಸಿತು. ಇದರ ಉದ್ದೇಶವೇನು ? ದ್ವಿತೀಯ ಹಂತದಲ್ಲೇ ಸ್ವಾವಲಂಬಿಗಳಾದ ನಾಗರಿಕರನ್ನು ನಿರ್ಮಾಣ ಮಾಡುವುದೆ ? ಸ್ವಲ್ಪಮಟ್ಟಿಗೆ ಅದು ಸರಿ ಎನ್ನಬಹುದು. ಆದರೆ ಪದವೀಧರರಾಗುವವರ ಸಂಖ್ಯೆ ಇನ್ನು ಕಡಮೆಯಾಗುವುದು. ನಿರುದ್ಯೋಗಿ ಪದವೀಧರರ ಪ್ರಶ್ನೆಯು ಹೆಚ್ಚಿನ ಕಾಟ ತಪ್ಪುವುದು. ಹೇರಳ ಹಣವಿದ್ದವರು, ಅತ್ಯಗತ್ಯವಿದ್ದವರು ಮಾತ್ರ ಕಾಲೇಜುಗಳ ಮೆಟ್ಟಿಲು ಹತ್ತುವರು....

"ಇದರ ಹಿಂದೆ ರಾಜಕೀಯ ಇದೆ ಸಾರ್....ಮಹಾಬುದ್ಧಿವಂತರು ಇದನ್ನು ಸಲಹೆ ಮಾಡಿದಾರೆ....ಭೇಷ್ !"

ಹಾಗೆಂದು ಅದಕ್ಕೆ ಅವರ ವಿರೋಧವೇನೂ ಇರಲಿಲ್ಲ.

ವೆಂಕಟರಾಯರಿಗಿದ್ದ ದೃಷ್ಟಿಯೇ ಬೇರೆ. ಸುಧಾರಣೆಗಳಿಗೆ ಅಧಿಕಾರಿವೃತ್ತದ ಬೆಂಬಲ ದೊರೆತಿತ್ತು. ಆ ಕಾರಣದಿಂದ ಅವರೂ ಅದರ ಬೆಂಬಲಿಗರಾದರು; ಸುಧಾರಣೆಗಳ ಗುಣಗಾನ ಮಾಡಿದರು.

"ನಮ್ಮ ಸಂಸ್ಥಾನ ಮಾದರಿ ಸಂಸ್ಥಾನ ಅನ್ನೋದಕ್ಕೆ ಬೇರೆ ನಿದರ್ಶನ ಬೇಕೇನ್ರಿ ? ಎಲ್ಲದ್ರಲ್ಲೂ ಮೇಲ್ಪಂಕ್ತಿ ಹಾಕೋರು ನಾವು."

ಅದೇನಿದ್ದರೂ ವಿದ್ಯಾಭ್ಯಾಸದ ಈ ಸುಧಾರಣೆ ಹೊಸ ಪ್ರಯೋಗವೆನ್ನು ವುದರಲ್ಲಿ ಸಂದೇಹವಿರಲಿಲ್ಲ. ವಿದ್ಯಾಭ್ಯಾಸ ಪದ್ಧತಿಯಲ್ಲಿ ಬದಲಾವಣೆಯಾಗಲೇ ಬೇಕು ಎಂಬ ವಿಷಯದಲ್ಲೂ ಭಿನ್ನಾಭಿಪ್ರಾಯವಿರಲಿಲ್ಲ. ಈಗ ಸುಧಾರಣೆಗಳ ಪ್ರಸ್ತಾಪ ಬಂದು ಜಯದೇವನಿಗೆ ಸಂತೋಷವಾಯಿತು. ಈ ಮಹಾಪ್ರಯೋಗದಲ್ಲಿ ತಾನೂ ಭಾಗಿಯಾಗುವೆನೆಂದು ಹೆಮ್ಮೆ ಎನಿಸಿತು.

ಮುಂದೆ ಊರಲ್ಲಿ ಸಿದ್ಧವಾಗಬೇಕಾದ ಖಾಸಗಿ ಹೈಸ್ಕೂಲು, ಸ್ವಾವಲಂಬಿಗಳನ್ನು ಸಿದ್ಧಗೊಳಿಸುವ ಹೊಸ ಮಾದರಿಯ ದ್ವಿತೀಯ ಹಂತದ ಶಾಲೆಯಾಗಿ ತನ್ನ ನೇತೃತ್ವದಲ್ಲಿ ನಡೆಯುವ ಚಿತ್ರವನ್ನು ನಂಜುಂಡಯ್ಯನವರು ಕಲ್ಪಿಸಿಕೊಂಡರು.

ವೆಂಕಟರಾಯರು ಮಾತ್ರ ಅಂದರು :

"ಅಂತೂ ಈ ಪ್ರಯೋಗಗಳೆಲ್ಲ ಜಾರಿಗೆ ಬರೋ ಹೊತ್ತಿಗೆ ನನಗೆ ನಿವೃತ್ತಿಯಾಗಿರುತ್ತೆ !"

. . . . . . . . . . . . . . . . . . . . . .

ಸುಧಾರಣೆಯ ಮೊದಲ ಹೆಜ್ಜೆಯಾಗಿ ಲೋವರ್ ಸೆಕೆಂಡರಿ ಪರೀಕ್ಷೆಯನ್ನೇ—ಮಾಧ್ಯಮಿಕ ಶಾಲೆಯ ಸಾರ್ವಜನಿಕ ಪರೀಕ್ಷೆಯನ್ನೇ—ಮುಂದಿನ ವರ್ಷದಿಂದ ತೆಗೆದು ಹಾಕುವ ನಿರ್ದೇಶ ಬಂತು.

ಹಾಗಿದ್ದರೆ ಆ ವರ್ಷದ್ದೇ ಕೊನೆಯ ಐದು ರೂಪಾಯಿಗಳ ಎಲ್. ಎಸ್. ಪರೀಕ್ಷೆ.

ಇದರಿಂದ ಮಾತ್ರ ವೆಂಕಟರಾಯರಿಗೆ ಅಸಮಾಧಾನವಾಯಿತು. ದೂರದಲ್ಲಿ ಸೊಬಗಿನದಾಗಿ ಕಂಡಿದ್ದ ಸುಧಾರಣೆ ತೀರ ಸಮೀಪಕ್ಕೆ ಬಂದಾಗ ನಂಜುಂಡಯ್ಯನೂ ಅಳುಕಿದರು. ಇನ್ನು ಮುಂದೆ ಎಲ್. ಎಸ್. ಪರೀಕ್ಷೆಗೆ ಭೀತಿಯ ಸ್ವರೂಪವಿಲ್ಲ. ಕೋಚಿಂಗ್ ಕ್ಲಾಸುಗಳಿಗೂ ಹಿಂದಿನ ಮಹತ್ವವಿಲ್ಲ. ಉತ್ತರ ಪತ್ರಿಕೆಗಳ ಪರೀಕ್ಷಕರಾಗಿ ದೊರೆಯುತಿದ್ದ ಇನ್ನೂರು ರೂಪಾಯಿಗಳಷ್ಟರ ಸಂಭಾವನೆಯೂ ಇನ್ನಿಲ್ಲ.

"ಈ ಸುಧಾರಣೆಗಳ ಪರಿಣಾಮ ಏನಾಗುತ್ತೋ ನೋಡಬೇಕು" ಎಂದು ವೆಂಕಟರಾಯರೂ ನಂಜುಂಡಯ್ಯನವರೂ ಶಂಕೆ ವ್ಯಕ್ತ ಪಡಿಸಿದರು !

ಜಯದೇವನಿಗೆ ಆ ಏರ್ಪಾಟೂ ಸ್ವಾಗತಾರ್ಹವಾಗಿ ತೋರಿತ್ತು. ವರ್ಷವೆಲ್ಲ ಕಲಿತುದನ್ನು ಕೆಲವೇ ಗಂಟೆಗಳಲ್ಲಿ ಯಾಂತ್ರಿಕವಾಗಿ ಸಾರ್ವ

ತ್ರಿಕವಾಗಿ ಉತ್ತರಿಸುವ ವ್ಯವಸ್ಥೆ ಎಂದೂ ಆತನಿಗೆ ಮೆಚ್ಚುಗೆಯಾಗಿರಲಿಲ್ಲ. ಸದ್ಯಃ ಶಾಲೆಯ ಪರೀಕ್ಷೆ ಮಾತ್ರ ಎಂಬ ಭಾವನೆಯಾದರೂ ಉಂಟಾದರೆ ಅದರಿಂದ ಬೌದ್ಧಿಕ ಪ್ರದರ್ಶನಕ್ಕೆ ಹೆಚ್ಚು ಒಳ್ಳೆಯ ವಾತಾವರಣ ಏರ್ಪಡು ವುದು ಸಾಧ್ಯವಿತ್ತು.

ವಿದ್ಯಾಖಾತೆಯ ಈ ನಿರ್ಧಾರದಿಂದ ಬಲು ಹೆಚ್ಚಿನ ಪರಿಣಾಮ ಉಂಟಾದುದು ನಾಲ್ಕನೆ ತರಗತಿಯ ವಿದ್ಯಾರ್ಥಿಗಳ ಮೇಲೆ. ಅವರೇ ಎಲ್. ಎಸ್. ಪರೀಕ್ಷೆಯ ಕೊನೆಯ ತಂಡ.

ಜಯದೇವ ನಗುತ್ತ ಹೇಳಿದ:

"ನೀವೆಲ್ಲ ಮುದುಕ ಮುದುಕೀರಾದಾಗ್ಲೂ ಮೊಮ್ಮಕ್ಕಳ ಮುಂದೆ ಜಂಭ ಕೊಚ್ಕೋಬಹುದು--ಕಡೇ ಸಲ ಎಲ್. ಎಸ್. ಪರೀಕ್ಷೆ ಕಟ್ಟೋರು ನಾವೇ ಅಂತ!"

ಆದರೆ ನಾಲ್ಕಾರು ದಡ್ಡ ಹುಡುಗರಿಗೆ ಮಾತ್ರ ಅನಿಸದಿರಲಿಲ್ಲ:

'ಈ ಸಲ ಫೇಲಾದ್ರೆ ತೊಂದರೆ ಇಲ್ಲ. ಮುಂದಿನ್ಸಲ ಮೇಷ್ಟ್ರ ಪರೀಕ್ಷೆ. ಹೇಳಿಸಿ ಪಾಸ್ಮಾಡಿಸ್ಕೊಂಡರಾಯ್ತು!'

..................

ಇಂತಹ ಸಂಭವಗಳ ನಡುವೆ ರೇಂಜ್ ಇನ್ಸ್‌ಪೆಕ್ಟರರು ಬರುವ ರೆಂದು ಮುನ್ಸೂಚನೆ ಬಂತು. ಒಂದೇ ದಿವಸ ಆ ಊರಲ್ಲಿದ್ದು ಶಾಲಾ ಸಂದರ್ಶನ ಮುಗಿಸಿ ಮತ್ತೆ ಮುಂದಿನ ಊರಿಗೆ ಹೊರಡುವ ಕಾರ್ಯಕ್ರಮ.

ನಂಜುಂಡಯ್ಯನವರಿಗೆ ಅವರ ಪರಿಚಯವಿತ್ತು. ವೆಂಕಟರಾಯರಿಗೆ ಇರಲಿಲ್ಲ.

"ಯಾರ್ರೀ ಈತ? ರಾಧಾಕೃಷ್ಣಯ್ಯ ಅಂತೆ. ಗುರುತೇ ಇಲ್ವಲ್ಲಾ!"

"ಹೋದ ವರ್ಷವೂ ಆತನೇ ಬಂದಿದ್ರಪ್ಪಾ."

"ಹುಡುಗ್ನೋ?"

"ಮಧ್ಯವಯಸ್ಸು. ಸ್ವಲ್ಪ ವಿಚಿತ್ರ ಮನುಷ್ಯ. ರಂಗರಾಯರ ಮೇಲಿನ ಆರೋಪಗಳ ವಿಷಯ್ದಲ್ಲಿ ಷರಾ ಬರೆಯೋಕೂ ಒಪ್ಲಿಲ್ಲ. ಸುಮ್ನೆ ಡಿ. ಇ. ಒ. ಕಡೆ ದಾಟಿಸ್ಬಿಟ್ರು."

"ಗಟ್ಟಿ ಅನ್ನಿ."

"ಗಟ್ಟೀನೋ ಮೆತ್ತಗೋ. ಆಳವಾದ ಮನುಷ್ಯ. ಗೊತ್ತೇ

ಆಗಲ್ಲ. ನಗುವೂ ಇಲ್ಲ. ಮಾತೂ ಇಲ್ಲ. ಮೌನವಾಗಿ ಕೂತಿದ್ರೆ ಏನೋ ಒಂದು ಥರ ಆಗುತ್ತೆ."

ವೆಂಕಟರಾಯರ ಎದೆ ಚಿಳ್ಳೆಂದಿತು. ಮುಗುಳ್ನಗಲು ಅವರು ವಿಫಲರಾಗಿ ಯತ್ನಿಸಿದರು.

"ಮರ್ಜಿ ಹೇಗೆ ? ಎಲ್ಲಿ ಉಳ್ಕೋತಾರೆ ಬಂದ್ರೆ ?"

"ಹೋದ್ಸಲ ಬಂದಾಗ, ಈ ಊರಲ್ಲಿ ಮುಸಾಫಿರ್ ಖಾನೆ ಇಲ್ವೇ ?-ಅಂದ್ರು. ಇಲ್ಲ-ಅಂದಿದ್ದಕ್ಕೆ, ಯಾರ ಮನೆಗೂ ಹೋಗೋಕೆ ಒಪ್ದೆ, ಶಾಲೇಲೇ ಇದ್ಬಿಟ್ರು. ಜತೇಲಿ ಜವಾನ. ನೀವು ನಂಬ್ತಿರೋ ಇಲ್ವೋ-ಪೇಟೆಯಿಂದ ಅಕ್ಕಿ ತರಕಾರಿ ಹಾಲು ಮೊಸರು ಜವಾನ ಕೊಂಡ್ಕೊಂಡು ಬಂದ. ಸೌದೆ ಮಾತ್ರ ಈ ಕಾಡಿನಲ್ಲಿ ಮಾರಾಟಕ್ಕೆ ಸಿಗೋದಿಲ್ಲಾಂತ ಎಲ್ಲಿಂದಲೋ ಇಸಕೊಂಡು ಬಂದಿದ್ದಾಯಿತು !"

"ಗೊತ್ತು ಬಿಡಿ. ಈ ಜಾತೀನ ನೋಡಿದೀನಿ."

ವೆಂಕಟರಾಯರ ಬಹಿರಂಗ ಮೂದಲಿಕೆ,ನಂಜುಂಡಯ್ಯನವರ ಸೂಕ್ಷ್ಮ ವ್ಯಂಗ್ಯ, ಆ ಅಧಿಕಾರಿಯ ಬಗೆಗೆ ಜಯದೇವನಲ್ಲಿ ಆದರ ಮೂಡಿಸಿತು.

ಇನ್ಸ್ಪೆಕ್ಟರು ಯಾವ ಜಾತಿ ಎಂದು ತಿಳಿದುಕೊಳ್ಳಲು ವೆಂಕಟರಾಯರು ಕುತೂಹಲಿಯಾಗಿದ್ದರು. ಅವರು ಬ್ರಾಹ್ಮಣನಲ್ಲವೆಂಬುದಷ್ಟೆ ನಂಜುಂಡಯ್ಯನಿಗೆ ಗೊತ್ತಿದ್ದರೂ ಅವರಾಗಿ ಹೇಳಲಿಲ್ಲ.

ವೆಂಕಟರಾಯರು ಇನ್ಸ್ಪೆಕ್ಟರರ ಸ್ವಾಗತಕ್ಕೆ ಸಿದ್ಧತೆ ನಡೆಸಿದರು. ಚಿಕ್ಕ ಪರೀಕ್ಷೆಗಾಗಿ ಓದುತ್ತಲಿದ್ದ ವಿದ್ಯಾರ್ಥಿಗಳಲ್ಲಿ ಕೆಲವರನ್ನಷ್ಟೆ ಆಯ್ದು ಇನ್ಸ್ಪೆಕ್ಟರ ಮುಂದೆ ಪ್ರಶ್ನೆ ಕೇಳುವುದೆಂದು ಗೊತ್ತಾಯಿತು. ಶಾಲಾ ಕಟ್ಟಡ ಸ್ವಚ್ಛವಾಯಿತು. ಒಳ್ಳೆಯ ಬಟ್ಟೆಗಳನ್ನೇ ಹಾಕಿಕೊಂಡು ಬರ ಬೇಕೆಂದು ಸಾರಿ ಹೇಳಿದ್ದಾಯಿತು. ಎಂದಿಲ್ಲದ ಚಟುವಟಿಕೆಯನ್ನು ಪ್ರದರ್ಶಿ ಸುತ್ತ ವೆಂಕಟರಾಯರು ಓಡಾಡಿದರು.

.........

ರೇಂಜ್ ಇನ್ಸ್ಪೆಕ್ಟರು ರಾಧಾಕೃಷ್ಣಯ್ಯ ಬಂದಿಳಿದರು. ಅವರು ಸಂತೋಷಗೊಳ್ಳಲಿಲ್ಲ. ರೇಗಲಿಲ್ಲ. ಏನೂ ಅನ್ನಲಿಲ್ಲ. ನಂಜುಂಡಯ್ಯ ಹೇಳಿದ್ದ ಹಾಗೆ, ಅವರ ಮೌನವೇ ವಿಚಿತ್ರವಾಗಿತ್ತು.

ಇನ್ಸ್‌ಪೆಕ್ಟರು ತನಿಖೆಗೆ ಬಂದಾಗ ಜಯದೇವ ಎರಡನೆ ತರಗತಿಗೆ ಪಾಠ ಮಾಡುತಿದ್ದ. ಇನ್ಸ್‌ಪೆಕ್ಟರು ವಿದ್ಯಾರ್ಥಿಗಳ ಬಳಿಯಲ್ಲೆ ಜಾಗ ಮಾಡಿ ಕುಳಿತರು. ಅವರು ಅಲ್ಲಿದ್ದರೆಂಬ ಗಮನವೇ ಇಲ್ಲದಂತೆ ಜಯದೇವ ಪಾಠ ಮಾಡಿದ. ಗಂಟೆ ಬಾರಿಸಿ ಪಾಠ ಮುಗಿದು ವಿದ್ಯಾರ್ಥಿಗಳು ಎದ್ದು ನಿಂತಂತೆ ರಾಧಾಕೃಷ್ಣಯ್ಯನೂ ಅವರಲ್ಲಿ ಒಬ್ಬರಾಗಿ ಎದ್ದು ನಿಂತರು. ಅವರು ಬಂದು ಜಯದೇವನ ಕೈಯನ್ನೇನೂ ಕುಲುಕಲಿಲ್ಲ. ಆದರೆ ಜಯದೇವ ಆವರೆಗೂ ಕಾಣದೇ ಇದ್ದ ಮುಗುಳುನಗೆಯೊಂದು ಅವರ ತುಟಿಗಳ ಮೇಲೆ ಮೂಡಿತ್ತು.

ನಂಜುಂಡಯ್ಯ ಹೇಳಿದ್ದಂತೆಯೇ ರಾಧಾಕೃಷ್ಣಯ್ಯ ಶಾಲೆಯಲ್ಲೇ ಉಳಿದರು. ತಮ್ಮ ವೆಚ್ಚವನ್ನು ತಾವೇ ನಿರ್ವಹಿಸಿಕೊಂಡರು. ಜವಾನನೇ ಅವರ ಊಟ ಉಪಚಾರಗಳನ್ನು ಮಾಡಿದ.

ಹಳೆಯ ಹುಲಿ ವೆಂಕಟರಾಯರಿಗೆ ರಾಧಾಕೃಷ್ಣಯ್ಯ ಯಾವ ಜನವೆಂದು ಜವಾನನನ್ನು ಕೇಳಿ ತಿಳಿಯುವುದು ಕಷ್ಟವಾಗಲಿಲ್ಲ. ತಮ್ಮವರಲ್ಲವೆಂದು ಗೊತ್ತಾದ ಮೇಲೆ, ಮತ್ತಷ್ಟು ಹೆಚ್ಚು ಎಚ್ಚರಿಕೆಯಿಂದ ಅವರು ವರ್ತಿಸಿದರು.

ಮುಖ್ಯೋಪಾಧ್ಯಾಯರು ರಾಧಾಕೃಷ್ಣಯ್ಯನನ್ನು ಬಿಟ್ಟೇ ಇರಲಿಲ್ಲ. ಆದರೂ ಒಮ್ಮೆ ವೆಂಕಟರಾಯರು ಮತ್ತು ನಂಜುಂಡಯ್ಯ ಇಲ್ಲದ ಹೊತ್ತು ನೋಡಿ, ಜಯದೇವನನ್ನು ಇನ್ಸ್‌ಪೆಕ್ಟರರು ಸಮೀಪಕ್ಕೆ ಕರೆದರು.

"ಇದೇ ಮೊದಲ್ನೇ ವರ್ಷವೇನು ?"

"ಹೌದು ಸಾರ್."

ಜಯದೇವ ನಿಂತೇ ಇದ್ದ. ರಾಧಾಕೃಷ್ಣಯ್ಯನೆಂದರು:

"ಆ ಕುರ್ಚಿ ಎಳಕೊಂಡು ಕೂತ್ಕೊಳ್ಳಿ."

ಜಯದೇವ ಹಾಗೆ ಮಾಡಿದ. ಮಾತು ಬೆಳೆಯಿತು. ಒಂದೊಂದಾಗಿ ಜಯದೇವನ ವಿಚಾರಗಳನ್ನೆಲ್ಲ ಅವರು ಕೇಳಿ ತಿಳಿದರು.

"ನೀವು ಯಾಕೆ ಕೋರ್ಸ್ ಪೂರ್ತಿ ಮಾಡ್ಲಿಲ್ಲ ?"

"ಪರಿಸ್ಥಿತಿ ಸರಿಯಾಗಿರ್ಲಿಲ್ಲ ಸಾರ್."

"ನನ್ನ ಕೇಳಿದ್ರೆ ನೀವು ಹ್ಯಾಗಾದ್ರೂ ಮಾಡಿ ಕೋರ್ಸು ಮುಗಿಸ್ಬೇಕು. ಆಮೇಲೆ ಟ್ರೇನಿಂಗೂ ಆಗ್ಲಿ."

ಆಸೆ ಹುಟ್ಟಿಸುವ ಸಿಹಿ ಮಾತುಗಳು.

"ನೀವು ಪಾಠ ಹೇಳೋದನ್ನ ನೋಡಿದೆ. ಸಂತೋಷವಾಯ್ತು. ನಿಮ್ಮಂಥ ಒಂದು ಸಾವಿರ ಜನ ಇದ್ರೆ ಸಂಸ್ಥಾನದಲ್ಲಿ ನಾವು ನಮ್ಮ ಕ್ಷೇತ್ರ ದಲ್ಲಿ ಏನು ಬೇಕಾದ್ರೂ ಸಾಧಿಸ್ಬಹುದು."

ಉತ್ತರ ಕೊಡುವುದಾಗಲಿಲ್ಲ ಜಯದೇವನಿಂದ.

"ಹ್ಯಾಗಿದಾರೆ ನಿಮ್ಮ ಹೆಡ್ಮೇಷ್ಟ್ರು?"

"..................."

"ಅರ್ಥವಾಯ್ತು. ನಾನೂ ಹಾಗೇ ಊಹಿಸ್ದೆ. ಹಿಂದೆ ರಂಗರಾವ್ ಅಂತ ಇದ್ರಲ್ವೆ?"

ಒಮ್ಮೆಲೆ ಜಯದೇವನ ನಾಲಿಗೆ ಚಲಿಸಿತು.

"ಹೌದು ಸಾರ್, ತುಂಬಾ ಒಳ್ಳೆಯವರು—ಸಮರ್ಥ. ಅವರಿಗೆ ಅನ್ಯಾಯವಾಯ್ತು!"

ರಂಗರಾಯರ ವಿಷಯವಾಗಿ ತಮ್ಮ ಅಭಿಪ್ರಾಯವೇನಿರಬಹುದೆಂಬು ದನ್ನು ತಿಳಿಯದೆಯೇ ಜಯದೇವ ಧೈರ್ಯವಾಗಿ ಹಾಗೆ ಹೇಳಿದ್ದನ್ನು ಕಂಡು ಇನ್ಸ್ಪೆಕ್ಟರರಿಗೆ ಸಂತೋಷವಾಯಿತು.

ಅವರು ಸ್ವರ ತಗ್ಗಿಸಿ ಅಂದರು :

"ಹುಂ. ಈ ವಿಷಯ ನಮ್ಮನಮ್ಮೊಳಗೇ ಇರ್ಲಿ ಜಯದೇವ್. ರಂಗ ರಾಯರಿಗೆ ಅನ್ಯಾಯವಾಗಿದೇಂತ ನನಗೆ ಗೊತ್ತಿದೆ. ಆದರೆ ನಾವು ಯಾರೂ ಏನೂ ಮಾಡೋದಾಗಲಿಲ್ಲ. ಮೇಲಿಂದ ಅನುಜ್ಞೆ ಬಂತು."

"............"

"ಇದನ್ನೆಲ್ಲ ನೋಡುವಾಗ ನಿರಾಶೆಯಾಗ್ತದೆ, ಅಲ್ವೆ ?"

"ಹೌದು ಸಾರ್."

"ಏನೇ ಆಗ್ಲಿ, ಉಪಾಧ್ಯಾಯ ವೃತ್ತೀನ ಬಿಡೋ ಯೋಚ್ನೆ ಮಾಡ್ಬೇಡಿ. ಹಳಬರಲ್ಲೂ ಅನುಭವಿಗಳು ಒಳ್ಳೆಯೋರು ಇದಾರೆ. ಆದರೆ ಕೆಲವರಂತೂ ಡೊಂಕಾಗಿ ಬೆಳೆದು ಕೊರಡಾಗಿದಾರೆ. Fit for fuel. ಉರು ವಲು ಸೌದೆಗೇ ಸರಿ. ಕಟುವಾಗಿ ಅಂದೆ ಅಂತ ತಪ್ಪು ತಿಳೀಬೇಡಿ. ನನಗೆ ಬೇಜಾರಾಗಿದೆ. ಮುಂದಿನ ಆಸೆ ಏನಾದರೂ ಇದ್ರೆ ಅದು ನಿಮ್ಮಂಥ ಯುವ

ಕರಿಂದ. ಯೌವನ, ಜೋಗಿನ ಜಲಪಾತ ಇದ್ದಹಾಗೆ ಅದರ ಸದ್ವ್ಯಯ ಆಗಬೇಕು."

ವೆಂಕಟರಾಯರು ಬರುತಿದ್ದುದರಿಂದ ಮಾತು ಅಲ್ಲಿಗೇ ನಿಂತಿತು.

ತಿಳಿಯಾದ ಜಲರಾಶಿಯಲ್ಲಿ ಮುಳುಗಿ ಎದ್ದು ಹೊರಬಂದ ಹಾಗೆ, ಜಯದೇವನ ಹೃದಯ–ಮಿದುಳು ನಿರ್ಮಲವಾಗಿದ್ದುವು. ಆತ ಕುಳಿತಲ್ಲಿಂದ ಎದ್ದು ಒಬ್ಬನೇ ಅಲ್ಲೇ ದೂರ ಸರಿದ.

ಆ ರಾತ್ರಿಯೇ ಮನೆಗೆ ಹೊರಡುತ್ತ ವೆಂಕಟರಾಯರು ಕೇಳಿದರು :

"ಏನು ಜಯದೇವ, ಮಾತುಕತೆ ನಡೆದಿತ್ತಲ್ಲಾ."

ಸುಳ್ಳಿನ ಹೊರತು ಬೇರೆ ಹಾದಿ ಇರಲಿಲ್ಲ.

"ಒಬ್ಬನೇ ಯಾಕಿದೀಯಾಂತ ಕೇಳ್ತಾ ಇದ್ರು."

"ಅಷ್ಟೇನಾ !"

"ಹೂಂ."

"ಯಾವಾಗ ಹೊರಡ್ತಾರಂತೆ ?"

"ನಾಳೇನೇ."

"ನಾಳೆ ರಜೆಕೊಟ್ಬಿಡೋಣ. ನನಗಂತೂ ಇಪ್ಪತ್ತನಾಲ್ಕು ಘಂಟೆ ಅಖಂಡ ನಿದ್ದೆ ಮಾಡ್ಬೇಕು !"

# ೧೪

ಜಯರಾಮು ಶೆಟ್ಟರ ಮನೆಯಲ್ಲಿ ಶಾಮಲೆಯನ್ನು ಕಂಡಾಗಲೆಲ್ಲ ಜಯದೇವನಿಗೆ ಬೆಂಗಳೂರು ನೋಡುವ ಹಂಬಲ ಉಂಟಾಗುತಿತ್ತು.

ವೇಣುಗೋಪಾಲನೇನೋ "ನವರಾತ್ರಿಯ ರಜದಲ್ಲಿ ಬಾ" ಎಂದು ಬರೆದಿದ್ದ. ಆ ಕಾಗದದ ಕೊನೆಯಲ್ಲಿ, "ಜಯದೇವನವರೆ ಬನ್ನಿ" ಎಂದು ಸುನಂದೆಯೂ ದುಂಡದುಂಡಗಿನ ಮುದ್ದಾದ ಅಕ್ಷರಗಳಲ್ಲಿ ಬರೆದಿದ್ದಳು; "ಜಯಣ್ಣಾ ಬಾ" ಎಂದಿರಲಿಲ್ಲ ಆಕೆ. ಒಂದು ವರ್ಷದ ತನಕ ಬೆಂಗಳೂರಿಗೆ ಹಿಂತಿರುಗಬಾರದು ಎಂದುಕೊಂಡಿದ್ದ ಜಯದೇವ ಮಾತ್ರ, ಆ ನಿರ್ಧಾರಕ್ಕೆದಿರು ಪ್ರತಿಭಟಿಸುತ್ತಿದ್ದ ಮನಸ್ಸನ್ನು ಬಿಗಿ ಹಿಡಿದ. ಆತ ಕೊಟ್ಟ ಉತ್ತರ ಸ್ಪಷ್ಟವಾಗಿತ್ತು: "ನಿಮ್ಮನ್ನೆಲ್ಲ ನೋಡಬೇಕೆಂದು ನನಗೂ ಆಸೆ. ಆದರೆ ಬೇಸಗೆ ರಜಾದವರೆಗೂ ಬರಲಾರೆ."

ಆಗಿನ್ನೂ 'ನನ್ನನ್ನು ದಾಟಿದ ಮೇಲಲ್ಲವೆ ಬೇಸಗೆ?' ಎಂದು ಚಳಿಗಾಲ ಅಣಕಿಸುತಿತ್ತು.

ಚಿಕ್ಕ ಪರೀಕ್ಷೆ ಮುಗಿಯಿತು. ತನ್ನ ಪಾಠಗಳಲ್ಲಿ ಹೆಚ್ಚಿನ ಹುಡುಗರು ನೀಡಿದ ಉತ್ತರ ನೋಡಿ ಜಯದೇವನಿಗೆ ಸಮಾಧಾನವೆನಿಸದಿರಲಿಲ್ಲ.

ಶಾಲೆಯನ್ನು ಕುರಿತು ಇನ್ಸ್‌ಪೆಕ್ಟರ್ ರಾಧಾಕೃಷ್ಣಯ್ಯ ಮಾಡಿದ ವರದಿಯ ಪ್ರತಿಯೊಂದು ಬಂದಾಗ ಜಯದೇವನ ಆತ್ಮವಿಶ್ವಾಸ ಮತ್ತಷ್ಟು ಬೆಳೆಯಿತು. 'ತೃಪ್ತಿಕರ'ವೆಂದೇ ಇತ್ತು ವರದಿ. ಅದಕ್ಕೆ ತಾವೇ ಕಾರಣ ಎಂಬಂತೆ ವೆಂಕಟರಾಯರೂ ವರ್ತಿಸಿದರು; ನಂಜುಂಡಯ್ಯನೂ ವರ್ತಿಸಿದರು. ಆದರೆ ರಾಧಾಕೃಷ್ಣಯ್ಯ ವರದಿ ಬರೆದಾಗ, ಬಹುಮಟ್ಟಿಗೆ ತಾನೇ ಅವರ ದೃಷ್ಟಿಯ ಮುಂದೆ ಇದ್ದೆನೆಂಬುದನ್ನು ಊಹಿಸುವುದು ಜಯದೇವನಿಗೆ ಕಷ್ಟವಾಗಲಿಲ್ಲ. ಒಂದೆಡೆ ರಾಧಾಕೃಷ್ಣಯ್ಯ ಬರೆದಿದ್ದರು: ಪಠ್ಯ ಪುಸ್ತಕಗಳ ಹೊರತಾದ ಬೌದ್ಧಿಕ ಚಟುವಟಿಕೆಗಳಿಗೆ ತುಂಬಾ ಆಸ್ಪದವಿದೆ. ಆ ಜವಾಬ್ದಾರಿಯನ್ನು ಹೊರಬಲ್ಲ ಉತ್ಸಾಹಿ ಉಪಾಧ್ಯಾಯರಿದ್ದೂ ಅತ್ತ ಗಮನ ಕೊಡದೇ ಇರುವುದು ಸರಿಯಲ್ಲ. ಆಟಗಳ ವಿಷಯದಲ್ಲೂ ಸಾಕಷ್ಟು ಸೌಕರ್ಯವಿಲ್ಲ." ಅದನ್ನೋದಿದ ಜಯದೇವ ಮುಗುಳ್ನಕ್ಕ. ಉತ್ಸಾಹಿ

ಉಪಾಧ್ಯಾಯರೆಂದು ಯಾರನ್ನು ಉದ್ದೇಶಿಸಿ ಬರೆದರೆಂಬುದು ವೆಂಕಟರಾಯರಿಗೂ ನಂಜುಂಡಯ್ಯನಿಗೂ ಹೊಳೆಯಿತು. ಆದರೆ ಅದನ್ನು ಬಹಿರಂಗವಾಗಿ ಒಪ್ಪಿಕೊಳ್ಳಲು ಅವರು ಸಿದ್ಧರಿರಲಿಲ್ಲ.

............

ಶಾಲೆಯ ವಾರ್ಷಿಕ ದಿನಾಚರಣೆಯ ಸಿದ್ಧತೆ ನಡೆಯಿತು. ಜಯದೇವನನ್ನು ಹೆಚ್ಚಿನ ದುಡಿತಕ್ಕೆ ಹಚ್ಚಿ ತಪ್ಪನ್ನಾದರೂ ಕಂಡುಹಿಡಿಯುತ್ತಿರಬಹುದೆಂದು ಮುಖ್ಯೋಪಾಧ್ಯಾಯರು ಭಾವಿಸಿದರು.

ಆಫೀಸು ಕೊಠಡಿಯಲ್ಲಿ ಜಯದೇವ ಸಲಹೆಗಳನ್ನು ಕೊಟ್ಟ.

"ವಿದ್ಯಾಭ್ಯಾಸ ಸುಧಾರಣೆಯ ವಿಷಯವಾಗಿ ಆ ಸಂದರ್ಭದಲ್ಲಿ ಒಂದು ಉಪನ್ಯಾಸ ಮಾಲೆ ಏರ್ಪಡಿಸೋದು ಒಳ್ಳೇದು."

"ಉಪನ್ಯಾಸ ಮಾಲೇನೇ ? ವಾರ್ಷಿಕೋತ್ಸವದ ಸಮಯದಲ್ಲಿ ಉಪನ್ಯಾಸ ಯಾರಿಗ್ರೀ ಬೇಕು ?"

"ಹಾಗಂದ್ರೆ ಹ್ಯಾಗ್ಸಾರ್?"

"ಛೆ ! ಛೆ ! ಮಾಲೆ ಗೀಲೆ ಒಂದೂ ಬೇಡಿ. ನಾವೇ ಯಾರಾದರೂ ಸುಧಾರಣೆಯ ವಿವರ ಏನೂಂತ ವಿವರಿಸಿದ್ರಾಯ್ತು."

"ಅಧ್ಯಕ್ಷ ಸ್ಥಾನಕ್ಕೆ ಹೊರಗಿಂದ್ಲೇ ಯಾರನ್ನಾದರೂ ಕರಿಸೋಣ. ಆಗ್ದೆ ?" ಎಂದು ನಂಜುಂಡಯ್ಯ ಕೇಳಿದರು.

"ಯಾರನ್ನು ಹೇಳಿ ?"

ಜಯದೇವನೆಂದ:

"ಸಾರ್ ನನ್ನೊಂದು ಸೂಚನೆ ಇದೆ. ಸಾಮಾನ್ಯವಾಗಿ ಮೇಲಿನ ಅಧಿಕಾರಿಗಳನ್ನೇ ಕರೆಯೋದು ರೂಢಿ ಅಲ್ವೆ? ಈ ಸಾರೆ ಯಾರಾದರೂ ಪ್ರಖ್ಯಾತರಾದ ಸಾಹಿತಿಗಳ್ನ ಕರೆಸೋಣ."

"ಸಾಹಿತಿಗಳು ಈ ಕೊಂಪೆಗೆ ಯಾಕ್ರೀ ಬರ್ತಾರೆ ? ಅವರಿಗೆ ಫಸ್ಟ್ ಕ್ಲಾಸೊ ಸೆಕೆಂಡ್ ಕ್ಲಾಸೊ ಪ್ರಯಾಣ ವೆಚ್ಚ ಕೊಡೋರು ಯಾರು ? ಅದಲ್ದೆ, ಬಂದ್ಮೇಲೆ ಅವರ ಸಾಹಿತ್ಯ ಭಾಷಣ ಕೇಳೋ ಜನರಾದ್ರೂ ಬೇಡ್ವೆ?"

"ಅಂಥವರಲ್ಲ ಸಾರ್. ಯುವಕ ಸಾಹಿತಿಗಳು ಯಾರನ್ನಾದರೂ—"

"ಪ್ರಗತಿಶೀಲ ಸಾಹಿತಿಗಳೇನ್ರಿ?"—ಎಂದು ನಂಜುಂಡಯ್ಯ ವ್ಯಂಗ್ಯವಾಗಿ ನಕ್ಕು ಕೇಳಿದರು.

"ಯಾಕ್ಸಾರ್ — ಜಿನರಾಜರನ್ನೋ ಕೃಷ್ಣರಾಜರನ್ನೋ ಕರಿಸಿದ್ರಾಗ್ದೆ?"

"ಅವರು ಯಾರು ?"—ಎಂದು ವೆಂಕಟರಾಯರು ಬೇಕುಬೇಕೆಂಬುದೇ ಕೇಳಿದರು. ಅದು ವ್ಯಂಗಮಿಶ್ರಿತ ಪ್ರಶ್ನೆ ಎಂಬುದು ಜಯದೇವನಿಗೆ ಹೊಳೆಯದಿರಲಿಲ್ಲ. ಮಾತನಾಡಿ ಪ್ರಯೋಜನವಿಲ್ಲವೆಂದು ಆತ ಸುಮ್ಮನಾದ. ಅದನ್ನು ಗಮನಿಸಿ ನಂಜುಂಡಯ್ಯನೆಂದರು:

"ಸಾಹಿತಿಗಳು ಯಾರೂ ಬೇಡಿ. ನಮ್ಮ ಅಧಿಕಾರಿಗಳನ್ನೇ ಕರಿಸೋಣ."

"ಯಾರನ್ನು—ರೇಂಜ್ ಇನ್ಸ್‌ಪೆಕ್ಟರ್ ರಾಧಾಕೃಷ್ಣಯ್ಯನವರ್ನ ಕರಿಸ್ತೀರೇನು ?"—ಎಂದು ಜಯದೇವ, ಅದಾದರೂ ಆಗಲಿ ಎಂಬ ಆಸೆಯಿಂದ ಹೇಳಿದ.

ವೆಂಕಟರಾಯರೂ ನಂಜುಂಡಯ್ಯನೂ ಪರಸ್ಪರ ಮುಖ ನೋಡಿಕೊಂಡರು.

"ರೇಂಜ್ ಇನ್ಸ್‌ಪೆಕ್ಟರು ಯಾತಕ್ಕೇ ? ಜಿಲ್ಲಾ ಕೇಂದ್ರಕ್ಕೆ ಹೋಗಿ ಜಿಲ್ಲಾಧಿಕಾರಿಗಳನ್ನೇ ಕರಕೊಂಡು ಬರ್ತೀನಿ."

ಹಾಗೆ ಹೇಳಿದ ವೆಂಕಟರಾಯರು ಅದನ್ನು ಮಾಡಿಯೇ ತೀರುವರೆಂಬ ವಿಷಯದಲ್ಲಿ ಸಂದೇಹವಿರಲಿಲ್ಲ. ಆ ರೀತಿ ಜಯದೇವನ ಮನಸ್ಸನ್ನು ನೋಯಿಸಿದ ಮೇಲೆ, ಆ 'ಉತ್ಸಾಹಿ ಉಪಾಧ್ಯಾಯ'ರ ಸಾಮರ್ಥ್ಯಕ್ಕೆ ಆಹ್ವಾನ ನೀಡುವ ಬೇರೆ ಕೆಲಸವನ್ನು ಮುಖ್ಯೋಪಾಧ್ಯಾಯರು ಆತನಿಗೆ ಒಪ್ಪಿಸಿದರು.

"ಹುಡುಗರ್ದೊಂದು ನಾಟಕ, ಹುಡುಗೀರ್ದೊಂದು ನಾಟಕ—ಇಷ್ಟು ಜವಾಬ್ದಾರಿ ನಿಮ್ಮ ಮೇಲೆ. ಏನು ಜಯದೇವ್ ?"

ಹೈಸ್ಕೂಲಿನಲ್ಲೆರಡು ಬಾರಿ, ಕಾಲೇಜಿನಲ್ಲೂ ಒಮ್ಮೆ, ನಾಟಕಗಳಲ್ಲಿ ಜಯದೇವ ಅಭಿನಯಿಸಿದ್ದ. ಆದರೆ, ಹುಡುಗ-ಹುಡುಗಿಯರನ್ನು ಕಲೆಹಾಕಿ ನಟನಟಿಯರನ್ನು ಸಿದ್ಧಗೊಳಿಸಿದುವುದು ಸುಲಭದ ಕೆಲಸವಾಗಿರಲಿಲ್ಲ.

"ಪ್ರಯತ್ನಪಟ್ಟು ನೋಡ್ತೀನಿ ಸಾರ್."

ಜಯದೇವನ ಈ ಅಳಕು ಕಂಡು ವೆಂಕಟರಾಯರಿಗೆ ಸಂತೋಷವಾಯಿತು.

"ಹಾಗಂದ್ರೆ ಸಾಲ್ದು. ನೀವು ಪೂರ್ತಿ ಜವಾಬ್ದಾರಿ ತಗೋಬೇಕು."

"ಆಗಲಿ—ಆಗಲಿ."

"ಮೂರು ವಾರ ತಯಾರಿ ಮಾಡಿದ್ರೆ ಸಾಕಲ್ವೆ? ಇಲ್ದೆ ಹೋದ್ರೆ, ನಾಟಕ-ನಾಟಕ ಅಂತ ಹುಡುಗ್ರು ಕೆಟ್ಟು ಹೋಗ್ತಾರೆ."

. ಹುಡುಗರು ಮುಂದೆ ಉತ್ತೀರ್ಣರಾಗದೆ ಇದ್ದರೆ ಅದಕ್ಕೆ ನೀನೇ ಕಾರಣನಾಗುವೆ—ಎಂದು ಎಚ್ಚರಿಸಿದ ಹಾಗಿತ್ತು ಆ ಮಾತು.

"ನಾಟಕಗಳೂ ಚೆನ್ನಾಗಿರ್ಬೇಕು. ಯಾವುದನ್ನು ಆರಿಸ್ತೀರೋ ಬಂದು ಹೇಳಿ," ಎಂಬ ನಿರ್ದೇಶ ಜತೆಯಲ್ಲೆ.

ಆಯ್ಕೆ ಸುಲಭವಾಗಿರಲಿಲ್ಲ. ವೇಣುಗೋಪಾಲನಿಗೆ ಬರೆಯೋಣವೆ?—ಎಂಬ ಯೋಚನೆ ಬಂತು. ಆದರೆ ಅದು ಬೇಗನೆ ಆಗುವ ಕೆಲಸವಲ್ಲ. ತನ್ನಲ್ಲಂತೂ ಯಾವುದೂ ಇರಲಿಲ್ಲ. 'ಕನ್ನಡದಲ್ಲಿ ಸಾಕಷ್ಟು ಒಳ್ಳೆಯ ನಾಟಕಗಳೇ ಇಲ್ಲ. ಹುಡುಗರಿಗಾಗಿಯೇ ಬರೆದ ಮೆಚ್ಚಿಕೊಳ್ಳುವ ನಾಟಕಗಳಂತೂ ಇಲ್ಲವೇ ಇಲ್ಲ—' ಎಂದು ಯಾರೋ ಸಾಹಿತಿಯೊಬ್ಬರು ಹಿಂದೆ ಒಂದು ಭಾಷಣದಲ್ಲಿ ಹೇಳಿದುದು ಜಯದೇವನ ನೆನಪಿಗೆ ಬಂತು. ಆ ಮಾತು ಸುಳ್ಳಾಗಿರಲಿಲ್ಲ. ಶಾಲೆಯ ಪುಸ್ತಕ ಭಂಡಾರದಲ್ಲಿದ್ದ ನಾಟಕಗಳು ಎರಡೇ ಎರಡು: ವಿ. ಸೀ. ಯವರ 'ಸೊಹ್ರಾಬ್-ರುಸ್ತುಂ' ಮತ್ತು ಟಿ. ಸದಾಶಿವಯ್ಯನವರ 'ಜಯಶ್ರೀ'. ಎರಡು ನಾಟಕಗಳೂ ಅಲ್ಲಿನ ಹುಡುಗರ ಮಟ್ಟವನ್ನು ಮೀರಿದ್ದುವು. ಆದರೆ 'ಸೊಹ್ರಾಬ್-ರುಸ್ತುಂ' ನಾಟಕದಲ್ಲಿನ ಹೃದಯಸ್ಪರ್ಶಿಯಾದ ಮಾನವೀಯ ಸಂಬಂಧವನ್ನು ಆ ಹುಡುಗರೂ ಕೂಡಾ ಅಭಿನಯಿಸಿ ತೋರಿಸುವುದು ಸಾಧ್ಯವಾದೀತೆಂದು ಜಯದೇವನಿಗೆ ತೋರಿತು.

'ಸೊಹ್ರಾಬ್-ರುಸ್ತುಂ' ನಾಟಕದ ಹೆಸರೆತ್ತಿದಾಗ ಮುಖ್ಯೋಪಾಧ್ಯಾಯರು ಮೊದಲು ಮೂಗು ಮುರಿದರು. ಅದು ಒಳ್ಳೆಯ ನಾಟಕ—ಎಂಬ ಕಾರಣದಿಂದ ಅದನ್ನೊಪ್ಪಿಕೊಳ್ಳಲು ಅವರು ಸಿದ್ಧರಿರಲಿಲ್ಲ. ಆದರೆ ಅದನ್ನು ಬರೆದವರು ವಿ. ಸೀ. ಯವರೆಂದು ತಿಳಿದ ಬಳಿಕ, "ಆಗಬಹುದು" ಎಂದರು.

ಹುಡುಗರ ನಾಟಕದಲ್ಲಿ ಸ್ತ್ರೀ ಪಾತ್ರವನ್ನು ಹುಡುಗರೇ ವಹಿಸಬೇಕಾಗಿತ್ತು. ಹುಡುಗಿಯರ ನಾಟಕದಲ್ಲಿ ಅವರೇ ಪುರುಷರು. ಬೆಂಗಳೂರಲ್ಲೇ

ಹುಡುಗರು ಟೋಫಿನ್ ಧರಿಸುವುದನ್ನು ಕಂಡಿದ್ದ ಜಯದೇವ ಆ ಹಳ್ಳಿಯಲ್ಲಿ ಬೇರೇನನ್ನೂ ನಿರೀಕ್ಷಿಸುವುದು ಸಾಧ್ಯವಿತ್ತು ?

ಇಷ್ಟಾದರೂ ಹುಡುಗಿಯರಿಗೆ ಸರಿಯಾದ ನಾಟಕ ಸಿಗಲಿಲ್ಲ. ಪ್ರಭಾ ಮಣಿ ದಿನಾಲೂ ಪೀಡಿಸುತ್ತಿದ್ದಳು :

"ಏನ್ಸಾರ್ ? ನಮ್ಮ ನಾಟಕ ಹುಡುಕ್ಲೆ ಇಲ್ವಲ್ಲಾ ಸಾರ್ ನೀವು?"

ಜಯದೇವನಿಗೆ ಒಮ್ಮೆಲೆ ಪ್ರಾಥಮಿಕ ಶಾಲೆಯ ತಿಮ್ಮಯ್ಯ ಮೇಷ್ಟ್ರ ನೆನಪಾಯ್ತು. ನಾಟಕದ ಖಯಾಲಿಯ ಮನುಷ್ಯ. ಆ ಸಂಜೆಯೇ ಜಯ ದೇವ ಅವರನ್ನು ಕಂಡ. ಮಾಧ್ಯಮಿಕ ಶಾಲೆಯ ಮೇಷ್ಟ್ರು ತಮ್ಮನ್ನು ಹುಡುಕಿಕೊಂಡು ಬಂದರೆಂದು ಅವರಿಗೆ ಸಂತೋಷವಾಗದಿರಲಿಲ್ಲ.

"ಹುಡುಗೀರು ಆಡೋಕೆ ಸರಿಹೋಗುವಂಥ ನಾಟಕ ಯಾವುದಾದ್ರೂ ಉಂಟೆ ತಿಮ್ಮಯ್ಯನವರೆ ?"

ಅವರು ಮೂಗಿಗೆ ನಸ್ಯವೇರಿಸಿ ಒಂದು ಕ್ಷಣ ಗಂಭೀರವಾಗಿದ್ದು ಹೇಳಿದರು :

"ಯಾವಾಗ್ಬೇಕು ?"

"ಈಗ್ಲೇ ಸಿಗೋ ಹಾಗಿಲ್ವೇನು ?"

"ಮನೇಲಿದೆ, ಹುಡುಕ್ಬೇಕು, ಇವತ್ತು ಮಂಗಳವಾರ. ಗುರುವಾರ ಕೊಟ್ರೆ ಸಾಕೊ ? ನೀವು ಎಲ್ಲಿರೋದು—ಜಯರಾಮಶೆಟ್ಟರ ಮನೇಲಿ ತಾನೆ ? ಗುರುವಾರ ಬೆಳಿಗ್ಗೆ ಬಂದು ನಿಮ್ಮನ್ನ ಕಾಣ್ತೇನೆ."

ಸಂಭಾಷಣೆಯನ್ನು ಕೇಳುತಲಿದ್ದ ಪ್ರಾಥಮಿಕ ಶಾಲೆಯ ಮುಖ್ಯೋ ಪಾಧ್ಯಾಯರೆಂದರು:

"ತಿಮ್ಮಯ್ಯ, ನಾಳೆ ಶಾಲೆಗೆ ನೀವು ಚಕ್ಕರ್—ಹಾಗಾದ್ರೆ."

ಮೂಗೊರೆಸಿ ತಿಮ್ಮಯ್ಯ, ಆ ದಿನ ಕಂಡಿದ್ದಂತೆ ನಾಟಕದ ಪಾತ್ರಧಾ ರಿಯ ಹಾಗೆಯೇ, ಬಿಡುಗಣ್ಣಿನಿಂದ ತಮ್ಮ ಮುಖ್ಯೋಪಾಧ್ಯಾಯರನ್ನು ನೋಡಿದರು.

..................

ಗುರುವಾರ ಬೆಳಗ್ಗೆ ಬಂದು ತಿಮ್ಮಯ್ಯ ಮೇಷ್ಟ್ರು, ಸುರಳಿ ಸುತ್ತಿದ್ದ ಹಾಳೆಗಳನ್ನು ಜಯದೇವನಿಗೆ ಕೊಟ್ಟರು.

"ಕೈ ಬರಹ. ಪ್ರತಿಮಾಡಿದ್ದಿದಾ ? "

ತಿಮ್ಮಯ್ಯ ಮೇಷ್ಟ್ರು ಮಾತನಾಡಲಿಲ್ಲ.

"ಕೃಷ್ಣಪ್ರೇಮ. ಯಾರು ಇದನ್ನು ಬರೆದದ್ದು ?"

ಆಗಲೂ ತಿಮ್ಮಯ್ಯ ಸುಮ್ಮನಿದ್ದರು. ಜಯದೇವ ಏನೂ ತಿಳಿಯದವ ನಂತೆ ಅವರ ಮುಖ ನೋಡಿದ. ಆ ಪ್ರಾಥಮಿಕ ಉಪಾಧ್ಯಾಯರ ಕಣ್ಣು ಗಳಲ್ಲಿ ತುಂಟತನದ ನಗೆಯಿತ್ತು.

"ಬೇರೆ ಯಾರೋ ಬರೆದಿದ್ದು ಬೇಕಾದ್ರೆ, ನನ್ಹತ್ರ ಬರಬೇಕಾಗಿತ್ತೆ ಸ್ವಾಮಿ ನೀವು ?"

ಜಯದೇವನಿಗೆ ಆಶ್ಚರ್ಯವಾಯಿತು:

"ನೀವೆ ಬರೆದ್ರಾ ಇದನ್ನ ?"

"ಸಂಶಯವೊ ?"

ಸಂಶಯವಿರಲಿಲ್ಲ. ತಿಮ್ಮಯ್ಯನವರನ್ನು ಕಾಣಲು ಹೋದ ದಿನ ಆವರ ಮುಖ್ಯೋಪಾಧ್ಯಾಯರು ಹೇಳಿರ್‍ಲಿಲ್ವೆ ? 'ನಾಳೆ ಶಾಲೆಗೆ ನೀವು ಚಕ್ಕರ್— ಹಾಗಾದ್ರೆ.' ಆಸಾಮಿ, ಹಳ್ಳಿಯಲ್ಲಿ ಮನೆಯಲ್ಲೇ ಕುಳಿತು ಬರೆದಿರ್‍ಬೇಕು!

"ಓದಿನೋಡಿ. ಸಾಯಂಕಾಲ ಸಿಗ್ತೀನಿ."

"ಕಾಫಿ ತಗೊಳ್ಳೋಣ."

"ಸಾಯಂಕಾಲ. ಬರೇ ಕಾಫಿಯಲ್ಲ-ತಿಂಡೀನೂ ಬೇಕು, ನಾಟಕ ಚೆನ್ನಾಗಿದ್ರೆ."

..................

ಅದು ಚೆನ್ನಾಗಿರುತ್ತದೆಂಬ ನಂಬಿಕೆಯೇನೂ ಜಯದೇವನಿಗೆ ಇರಲಿಲ್ಲ ಆದರೂ ಓದಲು ಮೊದಲು ಮಾಡಿದ. ಓದುತ್ತ ಬೆರಗಾದ. ಹಳೆಯ ನಾಟಕ ಗಳ ಶೈಲಿಯಿತ್ತು. ಒಂದು ತೂಕ ಹೆಚ್ಚಾಗಿಯೇ ಇದ್ದ ಪ್ರಾಸಪ್ರಿಯತೆ. ನಡು ನಡುವೆ ಲಲಿತವಾದ ಹಾಡುಗಳು. ಆ ಹಾಡುಗಳಿಗೆ ಸ್ವರಪ್ರಸ್ತಾರ. ಕಥಾವಸ್ತು ಕೃಷ್ಣ-ರಾಧೆಯರ ಪ್ರೇಮಕ್ಕೆ ಸಂಬಂಧಿಸಿದ್ದು. ರಂಗಭೂಮಿಯ ಮೇಲೆ ಅದು ಅಭಿನಯಿಸಲ್ಪಡುತ್ತಿದ್ದಂತೆಯೇ ಚಿತ್ರಿಸಿಕೊಂಡು ಜಯದೇವ ಓದಿದ. ಅವನಿಗೆ ಸಮಾಧಾನವಾಯಿತು: ತೃಪ್ತಿಯಾಯಿತು. ದೋಷಗಳಿ ದ್ದರೂ ಕೃತಿ ಸುಂದರವಾಗಿತ್ತು. ನಾಲ್ವತ್ತೈದು ನಿಮಿಷಗಳ ನಾಟಕ. ತಿಮ್ಮಯ್ಯನವರಲ್ಲಿ ಅಂಥ ಸಾಮರ್ಥ್ಯ ಹುದುಗಿರಬಹುದೆಂದು ಜಯದೇವ ಊಹಿಸಿಯೇ ಇರಲಿಲ್ಲ.

೯

ಶಾಲೆಗೆ ಹೋಗಲು ತಡವಾಗಿ ಹೋಗಿತ್ತು. ಅವಸರ ಅವಸರವಾಗಿ ಸ್ನಾನ ಮಾಡಿ ಬಟ್ಟೆಹಾಕಿಕೊಂಡು 'ಕೃಷ್ಣ ಪ್ರೇಮ'ದ ಸುರುಳಿಯನ್ನು ಕೈಲೆತ್ತಿಕೊಂಡು ಶಾಲೆಗೆ ವೇಗವೇಗವಾಗಿ ನಡೆದ. ಆಗಲೆ ಪಾಠಗಳು ಆರಂಭವಾಗಿದ್ದುವು. ತನ್ನ ಪಾಠವಿದ್ದ ಮೂರನೆಯ ತರಗತಿಗೆ ಏನೋ ಒಂದು ಲೆಕ್ಕ ಕೊಟ್ಟು ವೆಂಕಟರಾಯರು ತಮ್ಮ ತರಗತಿಗೆ ಹೋಗಿದ್ದರು. ಜಯದೇವ ತರಗತಿಯನ್ನು ಹೊಕ್ಕರೂ ಹುಡುಗರ ಕ್ಷಮೆ ಕೇಳಿ, ಆ ಲೆಕ್ಕವಾಗುವವರೆಗೂ ಕಾದು ಕುಳಿತಿದ್ದು, ಆ ಬಳಿಕ ತನ್ನ ಪಾಠಮಾಡಿದ.

ಮಧ್ಯಾಹ್ನದ ವಿರಾಮದವರೆಗೂ ಸಿಡುಕಿನಲ್ಲೇ ಇದ್ದರು ವೆಂಕಟರಾಯರು. ಉಪಾಹಾರದ ಬಿಡುವಿನಲ್ಲಿ ಜಯದೇವ ಹೇಳಿದ:

"ಹುಡುಗೀರ್ಗೆ ಬೇಕಾದ ನಾಟಕ ಸಿಕ್ತು."

"ಓ! ಅದಕ್ಕೆ ತಡವಾಯ್ತೊ? ನಿಮ್ಮನ್ನು ಹುಡುಕೋದಕ್ಕೆ ಜವಾನನ್ನ ಕಳಿಸೋಣಾಂತಿದ್ದೆ."

"ಓದ್ತಾ ಇದ್ದವನಿಗೆ ಹೊತ್ತಾದ್ದು ಗೊತ್ತಾಗಲಿಲ್ಲ... ಇಲ್ಲೇ ಪ್ರಾಥಮಿಕ ಶಾಲೇಲಿ ತಿಮ್ಮಯ್ಯ ಅಂತ ಒಬ್ಬರು ಮೇಷ್ಟ್ರಿದಾರೆ. ಅವರು ಬರ ಕೊಟ್ರು."

"ಪರವಾಗಿಲ್ವೊ?"

"ಚೆನ್ನಾಗಿದೆ. 'ಕೃಷ್ಣ ಪ್ರೇಮ' ಅಂತ."

"ಪ್ರೇಮ ಗೀಮ ಜಾಸ್ತಿ ಹಾಕ್ಬೇಡೀಪ್ಪ!"

"ಉಂಟೆ ಸಾರ್ ಎಲ್ಲಾದ್ರೂ!"

"ನಾಳೇನೆ ಪ್ರಾಕ್ಟೀಸ್ ಇಟ್ಕೊಳ್ಳಿ. ನಾನೂ ಬರ್ತೀನಿ."

..............

ಸಂಜೆ ಜಯದೇವ ತಿಮ್ಮಯ್ಯನವರನ್ನು ಕರೆದುಕೊಂಡು ಆನಂದ ವಿಲಾಸಕ್ಕೆ ಹೋಗಿ ಭರ್ಜರಿಯಾಗಿ ತಿಂಡಿತಿನ್ನಿಸಿದ. ಆಮೇಲೆ ಇಬ್ಬರೂ ತಿಮ್ಮಯ್ಯನವರ ಹಳ್ಳಿಯತ್ತ ಸಾಗಿದ್ದ ಹಾದಿಯಲ್ಲಿ ಸಾವಕಾಶವಾಗಿ ನಡೆದು ಹೋದರು. ತಾವು 'ಕೃಷ್ಣಪ್ರೇಮ'ದಲ್ಲಿ ಸೇರಿಸಿದ್ದ ಒಂದೆರಡು ಹಾಡುಗಳನ್ನು ರಾಗವಾಗಿ ಅಂದು ತೋರಿಸಿದರು ತಿಮ್ಮಯ್ಯ.

ಜಯದೇವ ಮನಸಿನೊಳಗಿಂದ ಬಂದ ಒಂದು ಮಾತನ್ನು ಹೇಳಿದ:

"ನನಗೆ ಮುದ್ದಣನ ನೆನಪಾಗ್ತಿದೆ ತಿಮ್ಮಯ್ಯನವರೇ."

"ಮುದ್ದಣ-ಮನೋರಮೆ," ಎಂದು ತಿಮ್ಮಯ್ಯ ಮೆಲ್ಲನೆ ಅಂದು ನಕ್ಕು ಹೇಳಿದರು: "ನಮ್ಮನೇಲೇನಾದರೂ ನಾಟಕಾಭಿನಯ ಮಾಡಿದ್ರೆ ನನ್ನ ಮನೋರಮಾ ಪರಕೆ ತಗೊಂಡು ಬರ್ತಾಳೆ!"

...............

ಹುಡುಗಿಯರ ನಾಟಕದ ಪಾತ್ರಗಳನ್ನು ಹಂಚುವುದು ಸುಲಭವಾಗ ಲಿಲ್ಲ. ಇಂದಿರಾ ರಾಧೆಯಾದಳು. ಪುಟ್ಟ ಪ್ರಭಾಮಣಿ ಕೃಷ್ಣನಾದಳು.

ಮತ್ತೆ ಇಂದಿರೆಯ ಸಾಮೀಪ್ಯದ ಸನ್ನಿವೇಶ.......

ಒಂದು ಸಂಜೆ 'ಸೊಹ್ರಾಬ್-ರುಸ್ತುಂ' ಅಭ್ಯಾಸ. ಇನ್ನೊಂದುದಿನ 'ಕೃಷ್ಣಪ್ರೇಮ.' ಆ ಹುಡುಗಿಯರ ನಾಚಿಕೆಯೋ-ಸಂಭ್ರಮವೋ. ಅವರ ನಾಟಕದ ಅಭ್ಯಾಸ ನಡೆದಾಗ ಹುಡುಗರು ಯಾರೂ ಇಣಿಕಿ ನೋಡದಂತೆ ಎಚ್ಚರ ವಹಿಸಿ ಜಯದೇವನಿಗೆ ಸಾಕಾಗುತಿತ್ತು. ನಂಜುಂಡಯ್ಯನಿಗೆ ಅದೊಂದರಲ್ಲೂ ಆಸಕ್ತಿ ಇರಲಿಲ್ಲ. ವೆಂಕಟರಾಯರು ಮಾತ್ರ ಆಗಾಗ್ಗೆ ಬಂದು ಹೋಗುತ್ತಿದ್ದರು. ಸಿದ್ಧತೆಯ ಪ್ರಗತಿಯನ್ನು ನಿರೀಕ್ಷಿಸುವುದ ಕ್ಕಲ್ಲ – ತನ್ನ ಮೇಲೆ ಕಣ್ಣಿಡುವುದಕ್ಕೆ ಅವರು ಬರುತಿದ್ದರೆಂಬುದನ್ನು ತಿಳಿ ಯಲು ಜಯದೇವನಿಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ.

ತಿಮ್ಮಯ್ಯ ಉಪಾಧ್ಯಾಯರು ಮಾತ್ರ ಆಗಾಗ್ಗೆ ಬಂದು ಎರಡು ನಾಟಕಗಳ ಅಭ್ಯಾಸದಲ್ಲೂ ಜಯದೇವನಿಗೆ ನೆರವಾಗುತ್ತಿದ್ದರು.

ನಾಯಿಕೆ ಇಂದಿರಾ ಜಯದೇವನನ್ನು ಮನೆಗೆ ಕರೆದಳು.

"ನಮ್ಮಮ್ಮ ನಿಮ್ಮನ್ನ ಕರಕೊಂಡು ಬಾ ಅಂದ್ರು ಸಾರ್."

ಜಯದೇವ ಅಂಜುಬುರುಕನಾಗಿರಲಿಲ್ಲ. ಆದರೆ ನಾಳೆಯ ದಿನ ಊರ ಲ್ಲೆಲ್ಲ ನಡೆಯುವ ಅಪಾರ್ಥ ಕಲ್ಪನೆಯ ಪ್ರಚಾರವನ್ನು ಕಲ್ಪಿಸಿಕೊಂಡು ಆತ ಅಳುಕಿದ. ಅವನು ಉಪಾಯವಾಗಿ ಉತ್ತರ ಕೊಟ್ಟ:

"ಈಗ ಬೇಡವಮ್ಮ. ವಾರ್ಷಿಕೋತ್ಸವವಾದ ಮೇಲೆ ನಿಮ್ಮನೇಲಿ ನಮಗೆಲ್ಲ ಕಾಫೀ ಕೊಟ್ಟೀಯಂತೆ."

ವಾರ್ಷಿಕೋತ್ಸವದ ನಾಟಕಗಳ ನಿರ್ದೇಶಕನಾದ ಜಯದೇವನ ಜನ ಪ್ರಿಯತೆ ಬಲುಬೇಗನೆ ಹೆಚ್ಚಿತು.

..................

ಶ್ಯಾಮಲೆಯನ್ನು ಕರೆದುಕೊಂಡು ಹೋಗಲು ಆಕೆಯ ಗಂಡ ಬಂದ. ಅಂತಸ್ತಿನಲ್ಲಿ ಆತ ಜಯರಾಮಶೆಟ್ಟರಿಗಿಂತ ಕಡಮೆಯವನೆಂಬುದು ಸ್ಪಷ್ಟ ವಾಗಿತ್ತು. ಶ್ಯಾಮಲಾ ಅವನೆದುರೇ ಅಂದು ಬಿಟ್ಟಳು :

"ನೀವು ಬೇರೆ ಮನೆ ಮಾಡಿದರೆ ಬರ್ತೀನಿ."

ಹಾಸನದಲ್ಲೇ ಇದ್ದು ಬೇರೆ ಮನೆ ಮಾಡುವುದು ಸಾಧ್ಯವಿರಲಿಲ್ಲ. ವರ್ಗ ಮಾಡಿಸಿಕೊಳ್ಳಲು ಯತ್ನಿಸುವುದಾಗಿ ಆತ ಹೇಳಿದ.

ಶ್ಯಾಮಲಾ ತಾಯಿ ಮನೆಯಲ್ಲೇ ಉಳಿದಳು.

ಮುಗುಳು ನಗುವುದು-ಗಹಗಹಿಸಿಯೂ ನಗುವುದು-ಕಳೆದು, ಸಣ್ಣ ಪುಟ್ಟ ಸಂಭಾಷಣೆಗೆ ಆರಂಭವಾಯಿತು.

"ನಿಮಗೆ ತುಂಬಾ ಸಂಕೋಚ !" ಎಂದೂ ಒಮ್ಮೆ ಆಕೆ ಹೇಳಿದಳು.

ಜಯದೇವ ಮಾತ್ರ ಮುಳ್ಳಿನ ಹಾಸಿಗೆಯ ಮೇಲೆ ಮಲಗಿದವನಂತೆ ದಿನ ಕಳೆದ.

……………

ವಾರ್ಷಿಕೋತ್ಸವ ವಿಜೃಂಭಣೆಯಿಂದಲೆ ಜರಗಿತು. ಜಿಲ್ಲಾ ವಿದ್ಯಾಧಿಕಾರಿ ಬಂದರು. ಶಂಕರಪ್ಪ ಹಿರಿತನ ವಹಿಸಿದರು. ನಾಟಕ ನೋಡಲು ಮಧ್ಯಾಹ್ನದಿಂದಲೆ ಕಾದು ಕುಳಿತಿದ್ದ ಪುಟ್ಟ ಹುಡುಗರ ಗದ್ದಲ ಗೊಂದಲಗಳ ನಡುವೆ, ಮಾತನಾಡಿದವರಿಗಷ್ಟೇ ಕೇಳಿಸುವಂತೆ ಅವರಿಗೆ ಮಾತ್ರವೇ ಅರ್ಥವಾಗುವಂತೆ, ಭಾಷಣಗಳಾದುವು. ಶುಭ್ರವಾದ ಕಚ್ಚೆಪಂಚೆಯುಟ್ಟು, ಅಷ್ಟೇ ಶುಭ್ರವಾದ ಜುಬ್ಬ ಧರಿಸಿ, ನೆರೆದವರ ಗಮನದ ಕೇಂದ್ರವಾಗಿ ಜಯದೇವ ಓಡಾಡಿದ. ರಂಗಭೂಮಿಯ ಎಲ್ಲ ಉಸ್ತುವಾರಿಯನ್ನೂ ತಿಮ್ಮಯ್ಯ ಮೇಷ್ಟ್ರು ವಹಿಸಿಕೊಂಡರು.

ಮೊದಲು 'ಕೃಷ್ಣ ಪ್ರೇಮ'ದ ಅಭಿನಯ. ಆ ಬಳಿಕ 'ಶೊಹ್ರಾಬ್-ರುಸ್ತುಂ.' ಎರಡು ನಾಟಕಗಳೂ ಚೆನ್ನಾಗಿದ್ದುವು. ಅಧ್ಯಕ್ಷರಾಗಿದ್ದ ವಿದ್ಯಾಧಿಕಾರಿಗಳಿಗೆ ನಾಟಕಗಳ ನಡುವೆ ವಂದನಾರ್ಪಣೆ ಮಾಡುವ ಸಂದರ್ಭದಲ್ಲಿ ವೆಂಕಟರಾಯರು ತಿಮ್ಮಯ್ಯನವರ ವಿಷಯ ಪ್ರಸ್ತಾಪಿಸಲೇ ಇಲ್ಲ. ನಾಟಕಗಳ ವಿಚಾರವಾಗಿ ಮಾತನಾಡುವ ನೆಪಮಾಡಿಕೊಂಡು ಜಯದೇವ ತಿಮ್ಮಯ್ಯನವರ ಗುಣಗಾನ ಮಾಡಿದ. ಪರದೆಯ ಹಿಂದೆ ಮೂಲೆಯಲ್ಲಿ ಒಬ್ಬರೇ ಕುಳಿತಿದ್ದ ತಿಮ್ಮಯ್ಯನವರ ಕಣ್ಣುಗಳು ಹನಿಗೂಡಿದುವು. ಮಾಧ್ಯ

ಮಿಕ ಶಾಲೆಯ ನಗರವಾಸಿ ಮೇಷ್ಟ್ರು, ಹಳ್ಳಿಯ ಪ್ರಾಥಮಿಕ ಶಾಲೆಯ ಬಡ ಉಪಾಧ್ಯಾಯರನ್ನು ಹೊಗಳಿದುದು ನೆರೆದಿದ್ದ ಹಲವರಲ್ಲಿ ಆಶ್ಚರ್ಯ ವನ್ನುಂಟು ಮಾಡದೆ ಇರಲಿಲ್ಲ.

....ರಂಗಭೂಮಿಯ ಮೇಲೆ ರಾಧೆಯಾಗಿ ರಾಣಿಯಾಗಿ ಮೆರೆದ ಇಂದಿರಾ ಮುಖದ ಮೇಲಿನ ಬಣ್ಣವನ್ನು ಅರ್ಧಕ್ಕರ್ಧ ಮಾತ್ರ ತೆಗೆದು ಅಲ್ಲಿಯೆ ನಿಂತಿದ್ದಳು. ಆಕೆಯ ತಾಯಿಯೂ ಒಳಗೆ ಬಂದುಬಿಟ್ಟಿದ್ದರು. ಇಂದಿರೆಯನ್ನು ನೋಡುತ್ತ ಹೃದಯದಲ್ಲೊಂದು ವಿಚಿತ್ರ ನೋವಿನ ಅನುಭವ ಜಯದೇವನಿಗಾಯಿತು. ನಾಲ್ವತ್ತು ದಾಟಿದ್ದರೂ ಇಂದಿರೆಯ ಸೌಂದರ್ಯವೇ ಗಾಂಭೀರ್ಯದ ಪ್ರೌಢತೆಯ ಒಪ್ಪಪಡೆದು ನಿಂತಹಾಗಿದ್ದರು ಆ ವಿಧವೆ ತಾಯಿ.

ಜಯದೇವನನ್ನೆ ಸೂಕ್ಷ್ಮವಾಗಿ ದಿಟ್ಟಿಸುತ್ತ ಅವರೆಂದರು:

"ನಮ್ಮ ಮನೆಗೆ ನೀವು ಬರಲೇ ಇಲ್ಲ ಮೇಷ್ಟ್ರೆ. ಬನ್ನಿ."

"ಬರ್ತೀನಮ್ಮ..."

ಒಬ್ಬೊಬ್ಬರಾಗಿ ಅಲ್ಲಿದ್ದವರೆಲ್ಲ ಹೊರಟು ಹೋದರು. ತಾಯಿಯನ್ನು ಹಿಂಬಾಲಿಸುತ್ತ ಹಿಂದಿರುಗಿ ಜಯದೇವನನ್ನೇ ನೋಡುತ್ತ ಇಂದಿರೆಯೂ ಹೊರಟಳು. ಪೆಟ್ರೋಮಾಕ್ಸ್ ದೀಪಗಳು 'ಇನ್ನು ಆರಿ ಹೋಗುತ್ತೇವೆ— ಹಾರಿ ಹೋಗುತ್ತೇವೆ' ಎಂದು ಬೆದರಿಸಿದುವು.

ಅಷ್ಟರಲ್ಲಿ ನಾಗರಾಜ ಬಂದ.

"ಇದೇನೋ ? ಮನೆಗೆ ಹೋಗಿಲ್ವಾ ಇನ್ನೂ?"

"ನಮ್ಮಪ್ಪ ಆಗ್ಲೆ ಹೋದ್ರು. ನೀವು ಬರ್ತೀರಿಂತ ಅಮ್ಮ ಅಕ್ಕ ಕಾದು ನಿಂತಿದಾರೆ. ಬರ್ತೀರಾ ಸಾರ್ ?"

ಓಡಾಡುವ ಗಡಿಬಿಡಿಯಲ್ಲೂ ಶ್ಯಾಮಲೆಯನ್ನು ಜಯದೇವ ಕಂಡಿದ್ದ. ಯೌವನವೊಂದೆ ತಿಳಿದುಕೊಳ್ಳಲು ಸಮರ್ಥವಾಗುವಂಥ ಕಾತರ ತುಂಬಿದ ಕಣ್ಣುಗಳಿಂದ ತನ್ನನ್ನು ಆಕೆ ನೋಡುತಿದ್ದಳು....

ಈಗ ಆಕೆಯ ಸಮೀಪದಲ್ಲೆ ಇದ್ದು ಮನೆಗೆ ಹಿಂತಿರುಗಬೇಕಾದಂತಹ ಪರಿಸ್ಥಿತಿ.........

"ನಡಿ ನಾಗರಾಜ, ಬಂದೆ."

ಕತ್ತಲೆಯ ಬೀದಿಯಲ್ಲಿ ನಡೆಯುತಿದ್ದಾಗ, ನಾಟಕಗಳು ಚೆನ್ನಾಗಿದ್ದುವೆಂದು ಶ್ಯಾಮಲೆಯ ತಾಯಿ ಮುಕ್ತಕಂಠದಿಂದ ಹೊಗಳಿದರು. ಆ ಕತ್ತಲಲ್ಲೂ ಶ್ಯಾಮಲ ತನ್ನನ್ನು ನೋಡುತಿದ್ದಂತೆ ಜಯದೇವನಿಗೆ ಭಾಸವಾಯಿತು. ಗಾಳಿ ಬೀಸುತಿರಲಿಲ್ಲ. ಆದರೆ ಶ್ಯಾಮಲೆಯ ಸೀರೆಯ ಸೆರಗು ಜಯದೇವನಿಗೆ ತಗಲಿತು. ಜಯದೇವನ ಮೈ ತಣ್ಣಗಾಗಿ ಆತ ದೂರ ಸರಿದ.

ಮನೆಯ ಬಳಿ ಮೆಟ್ಟಲೇರುತಿದ್ದಾಗ ಶ್ಯಾಮಲಾ "ಅವ್ವಯ್ಯಾ!" ಎಂದು ಕಾಲು ಜಾರಿ ಹಿಂದಕ್ಕೆ ವಾಲಿದಳು.

"ಮೆತ್ತಗೆ—ಹುಷಾರಿ !" ಎಂದ ಜಯದೇವ. ಶ್ಯಾಮಲೆಯೇನೋ ಚೇತರಿಸಿಕೊಂಡಳು. ಆದರೆ ಬೀಳುವುದನ್ನು ತಡೆಯಲೆಂದು ನೀಡಿದ್ದ ಆತನ ಕೈ ಅವಳದನ್ನು ಸೋಕಿತು. ಎಷ್ಟೊಂದು ಬೆಚ್ಚಗಿನ ಸ್ಪರ್ಶ !

ಡವಡವನೆ ಹೊಡೆದುಕೊಳ್ಳುತ್ತಿದ್ದ ಎದೆಯೊಡನೆ ಜಯದೇವ ತನ್ನ ಕೊಠಡಿಗೆ ಓಡಿದ. ದೀಪವನ್ನೂ ಉರಿಸದೆ ಹಾಸಿಗೆಯ ಮೇಲುರುಳಿಕೊಂಡ. 'ಊಂ ಊಂ' ಎಂದು ನರಳಾಟದ ಸ್ವರ ಹೊರಟಿತು. 'ಸುನಂದಾ ಸುನಂದಾ' ಎಂದು ಆತ ತೊದಲಿದ.

# ೧೫

ಅನಾರೋಗ್ಯದಿಂದ ಜಯದೇವ ಬಳಲಿದ. ಅದು ಮನಸಿನ ಕಾಹಿಲೆ. ಆ ಎಳೆಯ ಜೀವನದಲ್ಲಿ ಆವರೆಗೂ ಆಗದೇ ಇದ್ದ ಪ್ರಬಲ ಮನೋವಿಕಾರಗಳು ಆತನನ್ನು ಬಾಧಿಸಿದುವು. ತನ್ನ ಪ್ರೌಢಾವಸ್ಥೆಯನ್ನು ಸಾಧಿಸ ಹೊರಟಿದ್ದ ಯೌವನ, ಯಾವುದು ಸರಿ? ಯಾವುದು ತಪ್ಪು? ಎಂದು ಬಾರಿಬಾರಿಗೂ ಕೇಳುತ್ತಿತ್ತು. ಶ್ಯಾಮಲೆ ಕೆಟ್ಟವಳು ಎಂದು ಒಮ್ಮೊಮ್ಮೆ ಆತನಿಗೆ ಅನಿಸುವುದು. ಹಾಗೆ ಭಾವಿಸಬಾರದು; ದೃಷ್ಟಿ ಕೆಟ್ಟಿರುವುದು ತನಗೆ ; ಮಾನವ ಸಹಜವಾದ ಸ್ನೇಹ–ಸರಸವನ್ನು ತೋರಿದ ಮಾತ್ರಕ್ಕೆ ಆ ಹುಡುಗಿಯನ್ನು ಕೆಟ್ಟವಳೆನ್ನಬೇಕೆ?—ಎಂದೂ ತೋರುವುದು. ವಿವೇಕದ ಕಣ್ಣು ತಪ್ಪಿಸಿ, ದೇಹದ ಬಯಕೆ ಹೊರಗೆ ಹರಿದಾಡಲೆತ್ನಿಸುತ್ತಿತ್ತು. ಆದರೆ ಹೃದಯ ಅರಚುತ್ತಲೇ ಇತ್ತು: 'ನಾನು ಇಲ್ಲಿಲ್ಲ. ನನಗಿದೊಂದೂ ತಿಳಿಯದು. ನನ್ನ ಸ್ಥಾನ ಬೆಂಗಳೂರು.'

ರಾತ್ರೆ ಹೊತ್ತು ಹಾಸಿಗೆಯಲ್ಲಿ ಹೊರಳಿ ಹೊರಳಿ ನಿದ್ದೆ ಮಾಡಿದರೂ ಬೆಳಗ್ಗೆ ಎದ್ದಾಗ, ಜಾಗರವಿದ್ದವರ ಹಾಗೆ ಕಣ್ಣುಗಳು ಉರಿದು ಕೆಂಪಗಾಗುತಿದ್ದುವು.

ನಾಗರಾಜ ಕೇಳಿದ :

"ಮೈ ಚೆನ್ನಾಗಿಲ್ವೆ?"

ವಾರ್ಷಿಕೋತ್ಸವದ ಸಂದರ್ಭದಿಂದ ಆತ್ಮೀಯರಾಗಿದ್ದ ತಿಮ್ಮಯ್ಯ ಮೇಷ್ಟ್ರು ಬಂದು ಕೇಳಿದರು :

"ಮೈ ಚೆನ್ನಾಗಿಲ್ವೆ?"

ಬೇರೆ ಹಲವರೂ ಅದೇ ಪ್ರಶ್ನೆ ಕೇಳಿದರು. ಜಯದೇವ ಬೇರೆಬೇರೆ ಮಾತುಗಳಲ್ಲಿ ಒಂದೇ ರೀತಿಯ ಉತ್ತರವನ್ನು ಕೊಡುತ್ತ ಬಂದ:

'ಚೆನ್ನಾಗಿಲ್ದೆ ಏನು?' 'ಚೆನ್ನಾಗೇ ಇದೀನಲ್ಲ.' 'ಛೆ! ಛೇ! ಹಾಗೇನೂ ಇಲ್ಲ.'

ಯಾರಾದರೊಬ್ಬರು ಕೇಳುತ್ತಿದ್ದರು :

"ಕಣ್ಣು ಕೆಂಪಗಿದೆ. ರಾತ್ರೆ ನಿದ್ದೆ ಇರ್ಲಿಲ್ವೇನು?"

"ಸ್ವಲ್ಪ ಜಾಸ್ತಿಹೊತ್ತು ಓದ್ತಾ ಕೂತಿದ್ದೆ, ಅಷ್ಟೆ."

ಆಗ ಯಾರಾದರೂ ನಕ್ಕು ಹೇಳುತಿದ್ದರು :

"ದೊಡ್ಡ ಪರೀಕ್ಷೆ ಸಮೀಪವಾಗ್ತಿರೋದು ಹುಡುಗರಿಗೆ ಸಾರ್! ನಿವ್ಯಾಕೆ ಓದ್ತೀರಾ?'

ದೊಡ್ಡ ಪರೀಕ್ಷೆ. ಅದರಲ್ಲಿ ಸಂದೇಹವೇ ಇರಲಿಲ್ಲ. ಎಲ್ಲರೂ ಅಂತಹ ಪರೀಕ್ಷೆಗೆ ಬೇಗನೆ ಇಲ್ಲವೆ ತಡವಾಗಿ ಕುಳಿತುಕೊಳ್ಳಲೇಬೇಕು. ದುರ್ಬಲರಿಗೆ ಸೋಲು. ಹೃದಯ—ಮೆದುಳುಗಳನ್ನು ಒಂದಾಗಿ ಇರಿಸಿ ದೇಹದ ಮೇಲೆ ಸಂಪೂರ್ಣ ಒಡೆತನವಿರುವವರಿಗೆ ಗೆಲುವು.

ಸೋಲುವ ಇಷ್ಟವಿರಲಿಲ್ಲ ಜಯದೇವನಿಗೆ.

ಶ್ಯಾಮಲೆಗೆ ಏನಾಗಿತ್ತು? ಅತೃಪ್ತ ಗೃಹಜೀವನದ ಕೊರತೆಯನ್ನು ಒಳ್ಳೆಯವನೊಬ್ಬನ ಸಾಮಿಪ್ಯದಿಂದ ನೀಗಿಸಿಕೊಳ್ಳಲು ಆಕೆ ಇಚ್ಛಿಸಿದಳು. ಕಾಮದ ವಿಕೃತ ದೃಷ್ಟಿಯಿಂದಲೇ ಆಕೆ ಬದುಕನ್ನು ನೋಡುತ್ತಿರಲಿಲ್ಲ. ಆದರೆ ನಿರ್ದಿಷ್ಟವಾಗಿ ತನಗೇನು ಬೇಕೆಂಬುದು ಆಕೆಗೇ ತಿಳಿದಿರಲಿಲ್ಲ. ಅಸ್ಪಷ್ಟ ಆಸೆಗಳ ಕತ್ತಲಲ್ಲಿ ಹುಡುಗಿ ಎಡವಿ ನಡೆಯುತಿದ್ದಳು.

ಮನಸ್ಸಿನ ಹೊಯ್ದಾಟದ ನಿಜರೂಪವನ್ನು ತಿಳಿದುಕೊಳ್ಳಲು ಜಯದೇವ ಸಮರ್ಥನಾಗಲಿಲ್ಲ.......

....ಹದಿನೈದು ದಿನ ಸಂಕಟ ಅನುಭವಿಸಿದ ಬಳಿಕ ಜಯದೇವ ಕೊನೆಯ ತೀರ್ಮಾನಕ್ಕೆ ಬಂದ—ಕೊಠಡಿ ಬದಲಾಯಿಸುವ ತೀರ್ಮಾನ.

ಆನಂದವಿಲಾಸದ ಯಜಮಾನರನ್ನು ಬಿಟ್ಟರೆ ಬೇರೆ ಹಾದಿ ಇರಲಿಲ್ಲ. ಹೋಟೆಲಿಗೆ ತಾಗಿಯೆ, ಗಂಡಸರ ವಾಸಕ್ಕೆ ಯೋಗ್ಯವಾಗಿದ್ದ ಮೂರು ಕೊಠಡಿಗಳಿದ್ದುವು. ಅವುಗಳಲ್ಲೊಂದು ಖಾಲಿ ಇತ್ತು.

"ಬಾಡಿಗೆ ಜಾಸ್ತಿಯಾಗುತ್ತಲ್ಲ ಮೇಷ್ಟ್ರೇ."

"ಎಷ್ಟು?"

"ಹನ್ನೊಂದುರೂಪಾಯಿ."

"ಬೆಂಗಳೂರು ಬಾಡಿಗೆಯಾಯ್ತಲ್ರೀ !"

"ಏನು ಮಾಡ್ಲಿ ಹೇಳಿ ? ನೀವು ಈ ಊರಿಗೆ ಬಂದಾಗ್ಲೇ ಇಲ್ಲಿಗೆ ಕರೆ ಯೋಣಾಂತಿದ್ದೆ. ಆದರೆ ನಿಮಗೆ ಬಾಡಿಗೆ ಜಾಸ್ತಿಯಾಗುತ್ತೇಂತ—"

ನೀನು ಬಡವ, ನಿನ್ನ ಸಂಪಾದನೆ ಕಡಮೆ—ಎಂದೂ ಸೂಚ್ಯವಾಗಿ ಆ ಮಾತುಗಳು ಹೇಳುತಿದ್ದುವು.

"ಆಗ್ಲಿ, ಬರ್‍ತೀನಿ !"

ಹೋಟೆಲಿನವನಿಗೆ ಆಶ್ಚರ್ಯವಾದರೂ ಅದನ್ನಾತ ತೋರಿಸಿ ಕೊಡಲಿಲ್ಲ.

"ಯಾವತ್ತು ಬರ್‍ತೀರಿ ?"

"ಇವತ್ತೇ—ಸಾಯಂಕಾಲ."

ಸಂಬಳದ ಖರ್ಚು ಕಳೆದು ಉಳಿತಾಯವಾಗದಿದ್ದರೂ ಅಷ್ಟೆ. ಕೊಠಡಿ ಬದಲಾಯಿಸುವುದೇ ಸರಿ ಎಂದು ಕೊಂಡ.

ಜಯರಾಮಶೆಟ್ಟರ ಮನೆಯಲ್ಲಿ ಪ್ರಶ್ನೆಗಳಿಗೆಲ್ಲ ಜಯದೇವ ಕೊಟ್ಟ ಉತ್ತರ ಒಂದೇ :

"ಅಲ್ಲೇ ಸಮೀಪವಾಗಿದ್ರೆ ನನಗೆ ಅನುಕೂಲವಾಗುತ್ತೆ."

ನಾಗರಾಜ, ಏನನ್ನೊ ಕಳೆದುಕೊಂಡವನ ಹಾಗೆ ಹೇಳಿದ :

"ಹಾಗಾದರೆ, ಪಾಠ – ಸಾರ್ ?"

"ಬೇಗ್ಗೆ ಶಾಲೆಗೆ ಹೋಗ್ತಾ ಅಲ್ಲಿಗೇ ಬಂದುಬಿಡು ನಾಗರಾಜ."

ಶ್ಯಾಮಲಾ ನಗಲಿಲ್ಲ, ಹೊರಗೆ ಮುಖ ತೋರಿಸಲಿಲ್ಲ. ಆಕೆಗೆ ದುಃಖ ವಾಯಿತು—ಆದರೆ ತನ್ನ ಮನಸ್ಸಿನ ಹೊಯ್ದಾಟ ನಿಲ್ಲುವುದಲ್ಲಾ ಎಂದು ಸಮಾಧಾನವೂ ಆಯಿತು. 'ಪಾರಾದೆ' ಎಂದುಕೊಂಡ ಜಯದೇವ, ಇನ್ನೊಬ್ಬರ ಭಾವನೆಗಳನ್ನು ತಿಳಿಯುವ ಗೋಜಿಗೆ ಹೋಗಲಿಲ್ಲ.

ಜಯದೇವ ಕೊಠಡಿ ಬದಲಾಯಿಸಿದ್ದು ತಿಳಿದಾಗ ವೆಂಕಟರಾಯರು ಉತ್ಸುಕರಾದರು; ನಂಜುಂಡಯ್ಯ ಹುಬ್ಬು ಮೇಲೇರಿಸಿ ಯೋಚಿಸಲೆತ್ನಿಸಿದರು.

"ಏನು ಜಯದೇವ ? ಶೆಟ್ಟರ ಮನೇಲಿ ಅನುಕೂಲವಾಗಿರ್‍ಲಿಲ್ವೊ ?"

ಮುಖ್ಯೋಪಾಧ್ಯಾಯರ ಆ ಪ್ರಶ್ನೆಯಲ್ಲಿ ಆಣಕವಿತ್ತು. ಜಯದೇವ ಕಟ್ಟುನಿಟ್ಟಾಗಿ ಹೇಳಿದ :

"ಇಲ್ಲ ಸಾರ್, ಅನುಕೂಲವಾಗಿರ್‍ಲಿಲ್ಲ."

ವೆಂಕಟರಾಯರಿಗೆ ಮುಖಭಂಗವಾದ ಹಾಗಾಯಿತು. ಜಯದೇವ ನಿಲ್ಲದೆ ಇದ್ದಾಗ ನಂಜುಂಡಯ್ಯನೊಡನೆ ಅವರು ಆಪ್ತಾಲೋಚನೆ

ನಡೆಸಿದರು. ಜಯರಾಮಶೆಟ್ಟರ ಮನೆಯಲ್ಲಿ ಪತಿಗೃಹದಿಂದ ಬಂದು ಕುಳಿತಿದ್ದ ಯುವತಿಯೊಬ್ಬಳು ಇದ್ದಳೆಂಬ ವಿಷಯವೂ ವೆಂಕಟರಾಯರಿಗೆ ತಿಳಿದಿತ್ತು!

ಅವರು ಜಯರಾಮಶೆಟ್ಟರಲ್ಲಿ ಹೋದರು. ಶೆಟ್ಟರು ಮಾತನಾಡಿದ್ದು ತಮ್ಮ ಮಗನ ವಿಷಯವೇ.

"ನೀವೇ ಏನಾದ್ರೂ ಪಾಠ ಹೋಳ್ಕೊಡಾಕೆ ಆಗ್ತದಾ ಸ್ವಾಮಿ?"

"ಅದಕ್ಕೇನ್ರೀ......ಬೆಳಗ್ಗೆ ಏಳರಿಂದ ಎಂಟರವರೆಗೆ ಕಳಿಸ್ಕೊಡಿ. ಸ್ಪೆಷಲಾಗಿ ಪಾಠ ಹೋಳೋಣ."

ಮುಖ್ಯೋಪಾಧ್ಯಾಯರೇ ಜಯದೇವನ ಮಾತೆತ್ತಿದರು.

"ಒಳ್ಳೆಯವ್ರು...ಆದರೆ ಸ್ವಲ್ಪ ವಿಚಿತ್ರ—ಇನ್ನೂ ಹುಡುಗ" ಎಂದಷ್ಟೇ ಶೆಟ್ಟರು ಹೇಳಿದರು. ವೆಂಕಟರಾಯರಿಗೆ ನಿರಾಶೆಯಾಯಿತು: ಆದರೂ ಜಯದೇವ ಜವಾಬ್ದಾರಿ ಇಲ್ಲದ ಮನುಷ್ಯ—ಆತನ ನಡತೆ ಚೆನ್ನಾಗಿಲ್ಲ, ಎಂದು ಅವರು ತೀರ್ಮಾನಿಸಿದರು.

"ನಿಮಗೆ ಅವರಿಂದೇನಾದ್ರೂ ತೊಂದರೆಯಾಗಿದ್ರೆ ಹೇಳಿ, ವಿವೇಕ ಹೇಳ್ತೀನಿ" ಎಂದೂ ವೆಂಕಟರಾಯರು ಶೆಟ್ಟರಿಗೆ ಹೇಳಿದರು.

"ಛೆ! ಛೆ! ಆತನಿಂದ ತೊಂದರೆ ಆಗೋದಂದ್ರೇನು?" ಎಂದು ಶೆಟ್ಟರು ಆ ವಿಷಯವನ್ನೇ ತಳ್ಳಿಹಾಕಿಬಿಟ್ಟರು.

ಹೀಗಿದ್ದರೂ, ಮುಖ್ಯೋಪಾಧ್ಯಾಯರು ಮಾತ್ರ ಜಯದೇವನ ನಡತೆಯ ಬಗೆಗೆ ತಮ್ಮ ಅಭಿಪ್ರಾಯವನ್ನು ಬದಲಿಸಲಿಲ್ಲ,

ಮುಖ್ಯೋಪಾಧ್ಯಾಯರಿಗೆ ಸಂತೋಷವಾಗಿ ಜಯದೇವನಿಗೆ ಬೇಸರ ಬರುವಂತಹ ಬೇರೊಂದು ಪ್ರಕರಣ ನಡೆಯಿತು. ಶ್ಯಾಮಲೆ ಮತ್ತು ತನಗೆ ಸಂಬಂಧಿಸಿ ಕೆಟ್ಟ ನಾಲಿಗೆಗಳು ಏನನ್ನಾದರೂ ಅನ್ನಬಹುದೆಂದು ಜಯದೇವ ನಿರೀಕ್ಷಿಸಿದ್ದ. ಆದರೆ ಹಾಗೇನೂ ಆಗಲಿಲ್ಲ. ಅದರ ಬದಲು ವಿದ್ಯಾರ್ಥಿನಿ ಇಂದಿರೆ ಮತ್ತು ಆತನ ವಿಷಯದಲ್ಲಿ ಅಲ್ಲಸಲ್ಲದ ಮಾತುಗಳು ಹೊರಟುವು.

ಶಾಲೆಯ ಗೋಡೆಯ ಮೇಲೆ ಎದುರು ಭಾಗದಲ್ಲೇ ಯಾರೋ ಸುಣ್ಣದ ಕಡ್ಡಿಯಲ್ಲಿ ಬರೆದಿದ್ದರು:

"ಸಂಧಿ ವಿಂಗಡಿಸಿ! ಜಯದೇವೇಂದ್ರ—ಜಯದೇವ + ಇಂದಿರಾ!"

ಜಯದೇವನಿಗೆ ರೋಸಿಹೋಯಿತು. ಆದರೆ ರೇಗಾಡಿ ಪ್ರಯೋಜನ ವಿಲ್ಲವೆಂದು ಆತ ಸುಮ್ಮನಾದ. ಇಂದಿರಾ ತರಗತಿಯಲ್ಲಿ ತಲೆತಗ್ಗಿಸಿ

ಕುಳಿತಳು. ಶಾಲೆಯ ಜವಾನ ಗೋಡೆಯನ್ನೊರೆಸಿದ.

ಈ ಸಲ ಮಾತ್ರ ವೆಂಕಟರಾಯರು ಸುಮ್ಮನಿರಲಿಲ್ಲ. ಇದು ಯಾರೋ ಕೆಟ್ಟ ಹುಡುಗರ ಕಿಡಿಗೇಡಿತನವೆಂಬುದು ಅವರಿಗೆ ಗೊತ್ತಿದ್ದರೂ ಜಯದೇವನಿಗೆ ಇದಿರಾಗಿ ಉಪಯೋಗಿಸಿಕೊಳ್ಳಲು ಸಮಯಕ್ಕೆ ಸರಿಯಾಗಿ ಅದು ಒದಗಿ ಬಂತು.

ನ್ಯಾಯಾಧೀಶರು ಆರೋಪಿಯನ್ನು ತಮ್ಮ ಕೊಠಡಿಗೆ ಕರೆದರು.

"ನಿಮ್ಮಿಂದ ನನಗೆ ವಿವರಣೆ ಬೇಕು."

ಜಯದೇವ, ಮೈ ಉರಿಯುತ್ತಿದ್ದರೂ ತಾಳ್ಮೆಯಿಂದಿರಲು ಯತ್ನಿಸಿದ ನಿಶ್ಚಲ ಮುಖದಿಂದ ಅವರೆದುರು ಕುಳಿತ. ನೆಟ್ಟ ನೋಟದಿಂದ ಅವರನ್ನ ನೋಡಿದ.

"ಸುಮ್ನೆ ಕೂತಿದೀರಲ್ಲಾ !"

"ಯಾವುದಕ್ಕೆ ವಿವರಣೆ ?"

"ನೋಡಿಲ್ವೇನು ? ಗೋಡೆಮೇಲೆ ಬರೆದಿದಾರೆ."

"ನಾನು ಬರದ್ನೆ ಅದನ್ನ ?"

"ವಕ್ರವಾಗಿ ಮಾತಾಡ್ಬೇಡಿ, ನನಗೆ ಸರಳ ಉತ್ತರ ಬೇಕು."

ಜಯದೇವ ಎದ್ದು ನಿಂತ:

"ಸರಳವಾಗಿ ಹೇಳ್ಲೆ ? ನೀವು ತುಚ್ಛವಾಗಿ ವರ್ತಿಸಿದೀರಿ. ಇದೇ ನನ್ನ ಉತ್ತರ !"

ಅಷ್ಟು ಹೇಳಿ ಆತ ಹೊರಟು ಹೋದ. ಸ್ವಲ್ಪ ಹೊತ್ತು ದಿಗ್ಭ್ರಾಂತರಾಗಿ ಕುಳಿತ ವೆಂಕಟರಾಯರು ನಂಜುಂಡಯ್ಯನನ್ನು ಕರೆದು ರೇಗಾಡಿದರು. ತಮಗೆ ಅವಮಾನವಾಯಿತೆಂದರು. ಆ ಜಯದೇವ ಕೈಎತ್ತಿ ಹೊಡೆಯಲು ಬಂದನೆಂದರು. ಆತನನ್ನು ಕೆಲಸದಿಂದ ವಜಾ ಮಾಡಿಸ್ತೀನಿ ಎಂದು ಆರ್ಭಟಿಸಿದರು. ವಿದ್ಯಾಧಿಕಾರಿಯ ಶಾಲಾ ಸಂದರ್ಶನದ ದಿನದಿಂದ ಬಲಗೊಂಡು ವಾರ್ಷಿಕೋತ್ಸವದ ಕಾಲದಲ್ಲಿ ಪ್ರಬಲವಾದ, ದ್ವೇಷಾಸೂಯೆಯ ಬೆಂಕಿ ವೆಂಕಟರಾಯರ ಹೃದಯದಲ್ಲಿ ಭುಗ್ ಭುಗಿಲೆಂದು ಹತ್ತಿ ಕೊಂಡಿತು.

ವೆಂಕಟರಾಯರು ಜಯದೇವನ ವಿರುದ್ಧವಾಗಿ ಮೇಲಧಿಕಾರಿಗಳಿಗೆ ಕಳುಹಲೆಂದು ವರದಿ ಸಿದ್ಧಗೊಳಿಸಲು ಒಂದು ವಾರ ಹಿಡಿಯಿತು. ಆದರೆ ಜಯದೇವ ಅಷ್ಟರಲ್ಲೆ ಖಾಸಗಿಯಾಗಿ ರಾಧಾಕೃಷ್ಣಯ್ಯನವರಿಗೆ ಬರೆದ.

"ಹೀಗೆ ಬರೆಯುವುದು ತಪ್ಪೆಂದು ನನಗೆ ಗೊತ್ತಿದೆ; ಆದರೂ ಕ್ಷಮಿಸಿ," ಎಂದು ಹೇಳಿ, ನಡೆದುದೆಲ್ಲವನ್ನೂ ಆತ ವಿವರಿಸಿದ.

ಆ ಕಾಗದದಲ್ಲಿ ಅತಿ ಮುಖ್ಯವಾದ ಒಂದಂಶವಿತ್ತು, ದೀರ್ಘ ಯೋಚನೆಯ ಬಳಿಕ ಅದನ್ನು ಜಯದೇವ ಬರೆದಿದ್ದ.

"ಉಪಾಧ್ಯಾಯ ವೃತ್ತಿಯ ಮೊದಲ ವರ್ಷದ ಕೊನೆ ಸಮಾಪಿಸುತ್ತ ಬಂತು. ಮುಂದೆ ವಿದ್ಯಾಭ್ಯಾಸ ಮುಂದುವರಿಸಬೇಕೆಂದು ಮಾಡಿದ್ದೇನೆ: ಅಲ್ಲಿಂದ ಹಿಂತಿರುಗುವ ನನಗೆ ಇದೇ ಊರಲ್ಲಿ ಕೆಲಸ ಕೊಡಿಸುವಿರೆಂಬ ನಂಬಿಕೆ ಇದೆ. ನೀವು ನನ್ನಂಥವರಲ್ಲಿ ಏನೋ ಆಸೆ ಇಟ್ಟಿದ್ದಿರಿ. ಅದನ್ನು ಎಂದಿಗೂ ನಿರರ್ಥಕಗೊಳಿಸುವುದಿಲ್ಲವೆಂದು ಭರವಸೆ ಕೊಡುತ್ತೇನೆ."

# ೧೬

ದಿನಗಳು ಕಳೆದುವು. ವರ್ಷದ ಪರೀಕ್ಷೆಗಳಾದುವು. ಮೈಸೂರು ಸಂಸ್ಥಾನದ ಕೊನೆಯ ಲೋವರ್ ಸೆಕೆಂಡರಿ ಪರೀಕ್ಷೆಯೂ ನಡೆದು ಹೋಯಿತು. ಒಂದು ವರ್ಷ ತಾನು ಪಾಠ ಹೇಳಿದ್ದ ಆ ಹುಡುಗರನ್ನು ಕಂಡು ಜಯದೇವನಿಗೆ ಅಭಿಮಾನವೆನಿಸಿತು.

ಬೇಸಗೆಯ ರಜೆ. ಶಾಲೆ ಮುಚ್ಚುವ ದಿನ, ವೆಂಕಟರಾಯರೂ ನಂಜುಂಡಯ್ಯನೂ ಆಫೀಸು ಕೊಠಡಿಯಲ್ಲಿ ಕುಳಿತಿದ್ದರು. ಜಯದೇವ ದೃಢನಡಿಗೆಯಿಂದ ಅಲ್ಲಿಗೆ ಬಂದ. ಆತ, ನಾಜೂಕಾಗಿ ಮಡಸಿದ್ದ ಹಾಳೆಯನ್ನು ವೆಂಕಟರಾಯರ ಮೇಜಿನ ಮೇಲಿಟ್ಟ. ನಂಜುಂಡಯ್ಯ ಜಯದೇವನ ಮುಖನೋಡಿದರು. ವೆಂಕಟರಾಯರು ಓದಿ, ಆ ಹಾಳೆಯನ್ನು ನಂಜುಂಡಯ್ಯನಿಗೆ ಕೊಟ್ಟರು. ಜಯದೇವ ಕುಳಿತುಕೊಂಡ.

"ಹುಂ. ಅಂತೂ ಮೇಲಧಿಕಾರಿಗಳ ವಿಚಾರಣೆ ತಪಿಸ್ಕೊಳ್ಬೇಕೂಂತ ಮಾಡಿದೀರೋ ?"

ರಾಧಾಕೃಷ್ಣಯ್ಯ ತಮ್ಮ ದೂರನ್ನು ಗಮನಿಸದೇ ಇರಬಹುದೆಂಬ ಭಯವಿದ್ದರೂ ವೆಂಕಟರಾಯರು ಹಾಗೆ ಕೇಳಿದರು.

"ಸ್ವಲ್ಪ ವಿನಯವಾಗಿ ಮಾತನಾಡಿ!"

"ಇನ್ನು ಅದನ್ನು ಬೇರೆ ನಿಮ್ಕಿಂದ ಕಲೀಬೇಕೇನು ? ಐ. ಸೀ!"...

"ವಿದ್ಯಾಭ್ಯಾಸ ಮುಂದುವರಿಸ್ಬೇಕೂಂತ ಮಾಡಿದೀನಿ. ಅದಕ್ಕೋಸ್ಕರ ಹೊರಡ್ತಾ ಇದೀನಿ. ತೀರ್ಮಾನ ಮಾಡೋರು ನೀವಲ್ವಲ್ಲ! ಮೇಲಕ್ಕೆ ಕಳಿಸ್ಕೊಡಿ!"

"ಅದು ನನಗೆ ಗೊತ್ತಿದೆ :"

"ಸರಿ ಮತ್ತೆ !"

ನಂಜುಂಡಯ್ಯ ಸಿಗರೇಟು ಹಚ್ಚಿ ಅಂದರು :

"ಬೇರೆ ವಿಷಯವೇನೇ ಇರ್ಲಿ. ವಿದ್ಯಾಭ್ಯಾಸ ಮುಂದುವರಿಸೋಕೆ ನೀವು ಮಾಡಿರೋ ನಿರ್ಧಾರ ಶ್ಲಾಘನೀಯ !"

"ಆಗಲಿ ಸಾರ್. ನಿಮ್ಮ ಶುಭಾಶಯವೇ ನನಗೆ ಬೆಂಬಲ. ಮುಂದೆ ಇಲ್ಲಿಗೇ ವಾಪಸು ಬರ್ತೀನಿ—ನೀವೆಲ್ಲ ಬಾ ಅಂದೆ. !"

"ಬನ್ನಿ—ಖಂಡಿತವಾಗಿ ಬನ್ನಿ..."

ವೆಂಕಟರಾಯರಿಗೆ ಯಾಕೋ ಪೆಚ್ಚು ಪೆಚ್ಚಾಯಿತು. ನಂಜುಂಡಯ್ಯ ಮೃದುವಾಗಿ ಮಾತನಾಡತೊಡಗಿದ್ದು ಅವರಿಗೆ ಸಹನೆಯಾಗಲಿಲ್ಲ.

ತನ್ನಲ್ಲಾದ ಪರಿವರ್ತನೆ ಕಂಡು ತಾನೇ ಆಶ್ಚರ್ಯಪಡುತ್ತ ಜಯದೇವ ವೆಂಕಟರಾಯರ ಕಡೆಗೆ ನೋಡಿ ಹೇಳಿದ:

"ಇನ್ನೂ ಒಂದು ವಿಷಯ ನಿಮಗೆ ಹೇಳ್ಬೇಕು. ಕೋರ್ಸ್ ಮುಗಿಸಿ ವಾಪಸು ಬರೋವಾಗ ಹೆಂಡತೀನೂ ಕರಕೊಂಡು ಬರ್ತೀನಿ."

"ಓ! ಈಗಲಾದರೂ ಮದುವೆಯಾಗೋ ನಿರ್ಧಾರ ಮಾಡಿದ್ರಲ್ಲಾ !"

"ಈಗ? ಹುಡುಗಿ ಗೊತ್ತಾಗಿ ಎರಡು ವರ್ಷ ಆಯ್ತು. ಇನ್ನೂ ಎರಡು ವರ್ಷ ಕಾದಿರ್ತಾಳೆ. ವಿದ್ಯಾರ್ಥಿದೆಸೆ ಮುಗಿಸಿಯೇ ಮದುವೆ !"

ನಂಜುಂಡಯ್ಯ ಏಳುತ್ತ ಎಂದರು:

"ಇದೊಳ್ಳೆ ಶುಭಸಮಾಚಾರ. ಏಳಿ ಸಾರ್. ಏಳಿ ಜಯದೇವ್. ಇವತ್ತು ನನ್ನ ಲೆಕ್ಕದಲ್ಲಿ ಕಾಫಿ."

ಹೊರಡುತ್ತ ಆ ಬಡ ಕೊಠಡಿಯನ್ನು ಬಲುಪ್ರೀತಿಯಿಂದ ಜಯದೇವ ನೋಡಿದ. ಅಂಗಳ ದಾಟಿ ಬೀದಿಗಿಳಿಯುತ್ತ ಆತ ಹೇಳಿದ:

"ನಾನು ಈ ಶಾಲೇಲಿ ಉಪಾಧ್ಯಾಯನಾದ ಮೊದಲ್ನೇ ದಿವಸ ನೀವು ಕಾಫಿ ಕುಡಿಸಿದ್ರಿ ನಂಜುಂಡಯ್ಯನವರೇ; ಕೊನೇ ದಿವಸವೂ ನೀವೇ ಕುಡಿಸ್ತಿದೀರಿ !"

# ೧೭

ಜಯದೇವ ಮೇಷ್ಟ್ರು ಕಾಲೇಜು ವಿದ್ಯಾಭ್ಯಾಸವನ್ನು ಪೂರ್ತಿಗೊಳಿಸಲೆಂದು ಹೊರಟು ಹೋಗಲು ನಿರ್ಧರಿಸಿದ ಸುದ್ದಿ ಊರಲ್ಲಿ ಹಬ್ಬಿತು. ರಜೆ ಬಂದಾಗ ಶಾಲೆಯನ್ನೇ ಮರೆತಿದ್ದ ವಿದ್ಯಾರ್ಥಿಗಳು ಗುಂಪು ಗುಂಪಾಗಿ ಜಯದೇವನ ಕೊಠಡಿಗೆ ಬಂದು ಹೋದರು. ಬೀಳ್ಕೊಡುಗೆಯ ಮಾತುಗಳು ಆತನನ್ನು ಮೂಕನ್ನಾಗಿ ಮಾಡಿದುವು.

ಹುಡುಗರ ಕಣ್ಣುತಪ್ಪಿಸಿ ಬಿಡುವು ದೊರಕಿಸಿಕೊಂಡು, ಪರೀಕ್ಷೆಯ ಉತ್ತರ ಪತ್ರಿಕೆಗಳನ್ನೆಲ್ಲ ತಿದ್ದಿ ಮುಗಿಸಿ ಜಯದೇವ ನಂಜುಂಡಯ್ಯನವರ ಮೂಲಕ ಮುಖ್ಯೋಪಾಧ್ಯಾಯರಿಗೆ ಕಳುಹಿಸಿಕೊಟ್ಟ.

ತಿಮ್ಮಯ್ಯನವರ ಜತೆಯಲ್ಲಿ ಅವರ ಹಳ್ಳಿಗೆ ಹೋಗಿ ಒಂದು ದಿನವೆಲ್ಲ ಅಲ್ಲಿದ್ದ.

ತಿಮ್ಮಯ್ಯ ನಿರ್ಮಲ ನಗೆಯೊಡನೆ ಹೇಳಿದರು :

"ನೀವಿನ್ನು ಡಿಗ್ರಿ ಮನುಷ್ಯರಾಗ್ತೀರಿ !"

ತಿಮ್ಮಯ್ಯನನ್ನು ನೋಡುತ್ತಲಿದ್ದಂತೆ ಒಂದು ವಿಷಯ ಜಯದೇವನಿಗೆ ಹೊಳೆಯಿತು.

"ತಿಮ್ಮಯ್ಯ, ವಾಪಸು ಬಂದ್ಮೇಲೆ ನಾನು ಪ್ರಾಥಮಿಕ ಶಾಲಾ ಉಪಾಧ್ಯಾಯನಾಗ್ಲೇನ್ರಿ ?"

ತಿಮ್ಮಯ್ಯ ಗಟ್ಟಿಯಾಗಿ ನಕ್ಕರು.

"ತಮಾಷೆಯಲ್ಲ ತಿಮ್ಮಯ್ಯ. ನಾನೂ ನನ್ನ ಹೆಂಡತೀನೂ ಇಬ್ಬರೂ ಉಪಾಧ್ಯಾಯರಾಗ್ತೀವಿ."

"ಮದುವೆಯಾದ್ಮೇಲೆ ಮಕ್ಕಳಾಗ್ತಾರೆ ಗೊತ್ತೆ ಸ್ವಾಮಿ ?"

"ಆಗಲಿ, ಅದಕ್ಕೇನು ?"

"ತಾಯಿ ತಂದೆ ಇಬ್ಬರೂ ಸೇರಿ ನಿಮ್ಮ ಮಕ್ಕಳಿಗೆ ನೀವೇ ಪಾಠ ಹೇಳ್ಕೊಡ್ಬೇಕೂಂತ ಮಾಡಿದೀರೊ ?"

ತಮಾಷೆಯಲ್ಲ, ಇದು ತನ್ನ ಕನಸು, ಎನ್ನುವ ರೀತಿಯಲ್ಲಿ

ಜಯದೇವ ವಿವರಿಸಿದ. ಹುಟ್ಟಿದ ಮಗುವಿನ ವಿಕಾಸವೇ ಅತ್ಯಂತ ಮಹತ್ವದ ಘಟ್ಟ... ಆಗ ಸರಿಯಾಗಿ ಪಾಠಹೇಳಬಲ್ಲವನೇ ವಿದ್ಯಾ ವಿಚಕ್ಷಣ....

"ಏನೋಪ್ಪ. ವಿದೂಷಕ ಸ್ಥಾನದಲ್ಲಿರೋ ಉಪಾಧ್ಯಾಯನಿಗೆ ರಾಜಾ ಪಾರ್ಟ್ರ್ ಕೊಡ್ತಿದೀರಿ ನೀವು" ಎಂದರು ತಿಮ್ಮಯ್ಯ. ಆದರೆ ನಗಲಿಲ್ಲ. ಅವರೂ ಯೋಚಿಸುವಂತೆ ತೋರಿತು.

............

ಯಾವ ದಿನ ಹೊರಡುವುದೆಂಬುದನ್ನು ಜಯದೇವ ಯಾರಿಗೂ ಹೇಳ ಲಿಲ್ಲ. ತಾನು ಗೊತ್ತುಮಾಡಿದ್ದ ದಿನದ ಹಿಂದಿನ ಸಂಜೆ ಆಕಸ್ಮಿಕವಾಗಿ ಇಂದಿರೆಯ ಮನೆಗೆ ಹೋದ.

"ನಾನು ಈ ಊರಿಂದ ಹೊರಡ್ತೀನಿ. ಹೇಳಿಹೋಗೋಣಾಂತ ಬಂದೆ."

ಇಂದಿರಾ ಬಾಗಿಲ ಮರೆಯಲ್ಲಿ ಅಡಗಿದಳು. ಆಕೆಯ ತಾಯಿ ಕಾಫಿ ತಂದುಕೊಟ್ಟರು.

"ಕೆಟ್ಟ ಊರು ನಮ್ಮದು. ಇಲ್ಲದ್ದೆಲ್ಲಾ ಕೇಳಿದಿರಿ."

"ಏನಿಲ್ಲ! ಕೋರ್ಸ್ ಮುಗಿಸಿ ಇಲ್ಲಿಗೇ ವಾಪಸು ಬರಬೇಕೂಂತಿ ದೀನಿ."

ಆ ತಾಯಿಗೆ ಅದನ್ನು ನಂಬುವುದೇ ಕಷ್ಟವಾಯಿತು.

"ಆದರೆ ಇನ್ನೊಂದ್ಸಲ ಬರುವಾಗ ಒಬ್ಬನೇ ಬರೋದಿಲ್ಲ!"

ಇಂದಿರಾ ಹೊರಗೆ ಇಣಿಕಿ ನೋಡಿ ಮೆಲ್ಲನೆ ನಕ್ಕಳು. ಆಕೆಯ ಕಣ್ಣು ಗಳು ಹನಿಯೂಡುತಿದ್ದುವು. ಇಂದಿರೆಯ ತಾಯಿ ಹೇಳಿದರು:

"ನಿಮ್ಮ ಕೈ ಹಿಡಿಯೋ ಹುಡುಗಿ ಭಾಗ್ಯವಂತೆ. ಇಬ್ಬರೂ ಬಂದಾಗ ನಮ್ಮನೇಗೆ ಊಟಕ್ಕೆ ಬನ್ನಿ."

ಅಲ್ಲಿಂದ ಹೊರಡುತ್ತ ಜಯದೇವ ಕೇಳಿದ:

"ಇಂದಿರೇನ ಮುಂದಕ್ಕೆ ಓದಿಸೊಲ್ವೆ?"

"ಇಲ್ಲೇ ಹೈಸ್ಕೂಲಾದರೆ ಓದಿಸ್ಬೇಕು. ಹೊರಗೆ ಹ್ಯಾಗೆ ಕಳಿಸೋಣ? ನಾವು ಹೆಣ್ಣು ಹೆಂಗಸರು."

............

ಜಯರಾಮಶೆಟ್ಟರು ಮನೆಯಲ್ಲಿರಲಿಲ್ಲ. ಅವರಾಕೆ ತುಂಬ ಆದರದಿಂದ ಉಪಚರಿಸಿದಳು. ನಾಗರಾಜ ಅಳುಮೋರೆಯೊಡನೆ ಹೇಳಿದ:

"ನೀವು ಹೊರಟೇ ಬಿಟ್ರೀರ ಸಾರ್? ನಮ್ಮಕ್ಕನೂ ಹೋದವಾರವೇ ಭಾವನ ಮನೆಗೆ ಹೊರಟ್ಹೋದ್ಲು."

ಶ್ಯಾಮಲಾ ಅಲ್ಲಿರಲಿಲ್ಲ. ಹುಡುಗನನ್ನು ಆತ ಕೇಳಿದ:

"ಓದೋಕೆ ಯಾವ ಊರಿಗೆ ಹೋಗ್ತೀಯಪ್ಪಾ ಮುಂದಿನ ವರ್ಷ?"

"ಹಾಸನಕ್ಕೇ ಕಳಿಸ್ತಾರಂತೆ."

............

ನಂಜುಂಡಯ್ಯ ಕೈಕುಲುಕಿದರು.

"ಊಟಕ್ಕೆ ಇಲ್ಲೇ ಎದ್ಬಿಡಿ."

"ಊಟವಾಯ್ತು ನಂಜುಂಡಯ್ಯನವರೆ."

"ಮನಸ್ನಲ್ಲೇನೂ ಇಟ್ಕೋಬೇಡಿ ಜಯದೇವ."

"ನಾನೂ ಅದನ್ನೇ ಹೇಳೋಣಾಂತ ಬಂದೆ."

ಮುಂದಿನ ವರ್ಷ ಬೆಂಗಳೂರಿಗೆ ಹೋಗಲು ನಿರ್ಧರಿಸಿದ್ದ ವಿರೂಪಾಕ್ಷ ಕೊಠಡಿಯವರೆಗೂ ಜಯದೇವನ ಹಿಂದೆಯೇ ಬಂದ.

............

ರಾತ್ರಿಯೇ ಆನಂದವಿಲಾಸದ ಲೆಕ್ಕ ತೀರಿಸಿದ್ದ ಜಯದೇವ, ಮುಂಜಾವ ದಲ್ಲೆ ಎದ್ದು ಹೊರಡುವ ಸಿದ್ಧತೆ ಮಾಡಿದ. ಆ ತೀರ್ಮಾನಮಾಡಿದಂದಿನಿಂದ ಬೆಂಗಳೂರು, ವೇಣು, ಸುನಂದಾ ಹೆಚ್ಚು ಹೆಚ್ಚು ಸಮೀಪವಾಗಿದ್ದರು. ಕಾನ ಕಾನಹಳ್ಳಿಯೂ ಕರೆಯತೊಡಗಿತ್ತು.

ಆನಂದ ವಿಲಾಸದಲ್ಲಿ ಗೆದ್ದಲು ಕಾಟವೆಂದುಕೊಂಡು ತಂದಿದ್ದ ಪುಟ್ಟ ಟ್ರಂಕಿನಲ್ಲಿ ಬಟ್ಟೆಬರೆಗಳನ್ನೂ ಪುಸ್ತಕಗಳನ್ನೂ ಆತ ತುರುಕಿದ. ಹಾಸಿಗೆ ಯನ್ನು ಜಮುಖಾನದೊಳಗೆ ಸುರುಳಿಸುತ್ತಿದ. ಬರುವಾಗ ಧರಿಸಿದ್ದು ಪಾಯಜಾಮ-ಷರಟು; ಈಗ ಧೋತರ-ಜುಬ್ಬ. ಹಳ್ಳಿಯಲ್ಲಿ ಉಪಾಧ್ಯಾ ಯನಾಗಿ ತಾನು ಹೊಂದಿದ ರೂಪಾಂತರವನ್ನು ಸುನಂದಾ ಕಾಣಬೇಕೆಂಬ ಆಸೆ ಜಯದೇವನಿಗೆ.

ಬೆಳಗಾಗುವುದಕ್ಕೆ ಮುಂಚೆಯೇ ಹೊರಡುವ ಮೋಟಾರು ಹಿಡಿಯ ಬೇಕೆಂದು ಜಯದೇವ ತನ್ನ ಸಾಮಾನುಗಳನ್ನೆತ್ತಿಕೊಂಡು ಬೀದಿಗಿಳಿದ.

ಪ್ರಕೃತಿ ಪ್ರಶಾಂತವಾಗಿತ್ತು. ಅವನ ಹೃದಯದಲ್ಲೂ ಶಾಂತಿನೆಲೆಸಿತ್ತು.

ಒಂದು ವರ್ಷದಲ್ಲೇ ಐದು ವರ್ಷಗಳ ಬದುಕನ್ನು ತಾನು ಅನುಭವಿಸಿದಂತೆ ಜಯದೇವನಿಗೆ ತೋರಿತು.

ವಾಸ್ತವತೆ ಆಣಕಿಸಿದ್ದರೂ ಆತ ಸೋತಿರಲಿಲ್ಲ. ಜೀವನ, ಕಟುಸತ್ಯಗಳನ್ನು ತಿಳಿಸಿಕೊಟ್ಟು ಆತನ ದೃಷ್ಟಿಯನ್ನು ಸ್ವಚ್ಛಪಡಿಸಿತ್ತು.

ಹೃದಯದಲ್ಲಿ ಹುಮ್ಮಸಿತ್ತು ; ಬಲವಿತ್ತು ಬಾಹುಗಳಲ್ಲಿ.

ತನ್ನ ಬದುಕಿನ ಗುರಿ ದೂರವಿದ್ದಂತೆ-ಬಲು ದೂರವಿದ್ದಂತೆ-ಆತನಿಗೆ ಕಂಡರೂ ಹಾದಿಯನ್ನು ನಾನು ಬಲ್ಲೆ ; ಗುರಿ ಸೇರಬಲ್ಲೆ ಎಂದು ಆತ್ಮವಿಶ್ವಾಸದಿಂದ ಒಳದನಿ ಉಸುರುತಿತ್ತು.